

ಅಧ್ಯಯನಾಂಗ
ಕನ್ನಡ ವಿಶ್ವವಿದ್ಯಾಲಯ
ಹಂಪಿ ವಿದ್ಯಾರಣ್ಯ - ೫೮೩೨೭೬

ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ
ಎಂ.ಫಿಲ್ ಪದವಿ ನಿಬಂಧ

# ದೇವನೂರ ಮಹಾದೇವ ಅವರ 'ಎದೆಗೆ ಬಿದ್ದ ಅಕ್ಷರ' ಒಂದು ಅಧ್ಯಯನ

೨೦೧೨-೨೦೧೩

ಸಂಶೋಧನಾ ವಿದ್ಯಾರ್ಥಿ
ಮಾದೇಶ್.ಎನ್.
ಬಿ.ಎಂ.ಶ್ರೀ.ಸ್ಮಾರಕ ಪ್ರತಿಷ್ಠಾನ

ಮಾರ್ಗದರ್ಶಕ
ಡಾ.ಎಸ್.ಪ್ರಸಾದಸ್ವಾಮಿ
ಮುಖ್ಯ ಹಾಗು ಸಂಯೋಜಕ
ಕನ್ನಡ ಸ್ನಾತಕೋತ್ತರ ವಿಭಾಗ
ಸಪ್ರದ ಕಾಲೇಜು
ಕೃಷ್ಣರಾಜಪುರ, ಬೆಂ-೩೬






ಬಿ.ಎಂ.ಶ್ರೀ.ಸ್ಮಾರಕ ಪ್ರತಿಷ್ಠಾನ
ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರ
ನರಸಿಂಹರಾಜ ಕಾಲೋನಿ
ಬೆಂಗಳೂರು-೫೬೦೦೧೯



ಅಧ್ಯಯನಾಂಗ
**ಕನ್ನಡ ವಿಶ್ವವಿದ್ಯಾಲಯ**
ಹಂಪಿ ವಿದ್ಯಾರಣ್ಯ – ೫೮೩೨೭೬

ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ
ಎಂ.ಫಿಲ್ ಪದವಿ ನಿಬಂಧ

# ದೇವನೂರ ಮಹಾದೇವ ಅವರ 'ಎದೆಗೆ ಬಿದ್ದ ಅಕ್ಷರ' ಒಂದು ಅಧ್ಯಯನ

೨೦೧೨-೨೦೧೩

ಸಂಶೋಧನಾ ವಿದ್ಯಾರ್ಥಿ
**ಮಾದೇಶ್.ಎನ್.**
ಬಿ.ಎಂ.ಶ್ರೀ.ಸ್ಮಾರಕ ಪ್ರತಿಷ್ಠಾನ

ಮಾರ್ಗದರ್ಶಕ
**ಡಾ.ಎಸ್.ಪ್ರಸಾದಸ್ವಾಮಿ**
ಮುಖ್ಯ ಹಾಗು ಸಂಯೋಜಕ
ಕನ್ನಡ ಸ್ನಾತಕೋತ್ತರ ವಿಭಾಗ
ಸಪ್ರದ ಕಾಲೇಜು
ಕೃಷ್ಣರಾಜಪುರ, ಬೆಂ-೩೬



ಬಿ.ಎಂ.ಶ್ರೀ.ಸ್ಮಾರಕ ಪ್ರತಿಷ್ಠಾನ
ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರ
ನರಸಿಂಹರಾಜ ಕಾಲೋನಿ
ಬೆಂಗಳೂರು-೫೬೦೦೧೯



ಅಧ್ಯಯನಾಂಗ
ಕನ್ನಡ ವಿಶ್ವವಿದ್ಯಾಲಯ
ಹಂಪಿ ವಿದ್ಯಾರಣ್ಯ – ೫೮೩೨೭೬

ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ
ಎಂ.ಫಿಲ್ ಪದವಿ ನಿಬಂಧ

# ದೇವನೂರ ಮಹಾದೇವ ಅವರ 'ಎದೆಗೆ ಬಿದ್ದ ಅಕ್ಷರ' ಒಂದು ಅಧ್ಯಯನ

ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಎಂ.ಫಿಲ್ ಪದವಿ ನಿಬಂಧ

ಸಂಶೋಧನ ವಿದ್ಯಾರ್ಥಿ
**ಮಾದೇಶ್.ಎನ್.**
ಬಿ.ಎಂ.ಶ್ರೀ.ಸ್ಮಾರಕ ಪ್ರತಿಷ್ಠಾನ

ಮಾರ್ಗದರ್ಶಕ
**ಡಾ.ಎಸ್.ಪ್ರಸಾದಸ್ವಾಮಿ**
ಮುಖ್ಯ ಹಾಗು ಸಂಯೋಜಕ
ಕನ್ನಡ ಸ್ನಾತಕೋತ್ತರ ವಿಭಾಗ
ಸಪ್ರದ ಕಾಲೇಜು
ಕೃಷ್ಣರಾಜಪುರ, ಬೆಂ–೩೬

೨೦೧೨–೧೩




ಅಧ್ಯಯನಾಂಗ
ಕನ್ನಡ ವಿಶ್ವವಿದ್ಯಾಲಯ
ಹಂಪಿ ವಿದ್ಯಾರಣ್ಯ – ೫೮೩೨೭೬


ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಎಂ.ಫಿಲ್ ಪದವಿಯ ನಿಬಂಧ

**ನಿಬಂಧದ ವಿಷಯ**
**ದೇವನೂರ ಮಹಾದೇವ ಅವರ ' ಎದೆಗೆ ಬಿದ್ದ ಅಕ್ಷರ' ಒಂದು ಅಧ್ಯಯನ**

ಕನ್ನಡ ಮತ್ತು ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಎಂ.ಫಿಲ್. ಪದವಿಯ ನಿಬಂಧ

ರಿ.ನಂ. **BMSBKS-00595**

೨೦೧೨-೨೦೧೩

# <u>ಮಾರ್ಗದರ್ಶಕರ ಪ್ರಮಾಣ ಪತ್ರ</u>

ಬಿ.ಎಂ.ಶ್ರೀ.ಪ್ರತಿಷ್ಠಾನ ಬೆಂಗಳೂರಿನ ಎಂ.ವಿ.ಸೀ.ಸ್ನಾತಕೋತ್ತರ ಸಂಶೋಧನ ಕೇಂದ್ರದ ಮೂಲಕ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ೨೦೧೨-೧೩ನೇ ಸಾಲಿನ ಎಂ.ಫಿಲ್ ಪದವಿಗಾಗಿ ದೇವನೂರ ಮಹಾದೇವ ಅವರ 'ಎದೆಗೆ ಬಿದ್ದ ಅಕ್ಷರ' ಒಂದು ಅಧ್ಯಯನ ಎಂಬ ನಿಬಂಧವನ್ನು ಮಾದೇಶ್.ಎಸ್ ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಸಲ್ಲಿಸುತ್ತಿದ್ದಾರೆ.

ಈ ನಿಬಂಧವು ಸ್ವಂತ ಬರವಣಿಗೆಯಾಗಿದ್ದು ಇದರ ಯಾವುದೇ ಭಾಗವನ್ನು ಬೇರಲ್ಲೂ ಪ್ರಕಟಿಸಿಲ್ಲ ಮತ್ತು ಬೇರೆ ಯಾವುದೇ ಪದವಿಗಾಗಿ ಸಲ್ಲಿಸಿಲ್ಲ ಎಂದು ಈ ಮೂಲಕ ದೃಢೀಕರಿಸುತ್ತೇನೆ.

ದಿನಾಂಕ : [illegible].೧೪
ಸ್ಥಳ : ಬೆಂಗಳೂರು

ಸಹಿ
ಡಾ.ಎಸ್.ಪ್ರಸಾದಸ್ವಾಮಿ
ಮಾರ್ಗದರ್ಶಕ

ಡಾ. ಪ್ರಸಾದಸ್ವಾಮಿ. ಎಸ್.
ಎಂ.ಎ., ಎಂ.ಇಡಿ., ಪಿಎಚ್.ಡಿ.,
ಸಂಯೋಜಕ ಹಾಗು ಮುಖ್ಯ.
ಕನ್ನಡ ಸ್ನಾತಕೋತ್ತರ ವಿಭಾಗ
ಸ.ಪ್ರ.ದ. ಕಾಲೇಜು, ಕೃರಾಪುರ, ಬೆಂಗಳೂರು-36

## ಅಭ್ಯರ್ಥಿಯ ಪ್ರಮಾಣ ಪತ್ರ

ಬಿ.ಎಂ.ಶ್ರೀ.ಪ್ರತಿಷ್ಠಾನ ಬೆಂಗಳೂರಿನ ಎಂ.ವಿ.ಸೀ.ಸ್ನಾತಕೋತ್ತರ ಸಂಶೋಧನ ಕೇಂದ್ರದ ಮೂಲಕ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ೨೦೧೨-೧೩ನೇ ಸಾಲಿನ ಎಂ.ಫಿಲ್ ಪದವಿಗಾಗಿ ದೇವನೂರ ಮಹಾದೇವ ಅವರ 'ಎದೆಗೆ ಬಿದ್ದ ಅಕ್ಷರ' ಒಂದು ಅಧ್ಯಯನ ಎಂಬ ನಿಬಂಧವನ್ನು ಡಾ.ಎಸ್.ಪ್ರಸಾದಸ್ವಾಮಿ ಅವರ ಮಾರ್ಗದರ್ಶನದಲ್ಲಿ ಸಿದ್ದಪಡಿಸಿ ಸಲ್ಲಿಸುತ್ತಿದ್ದೇನೆ.

ಈ ನಿಬಂಧವು ನನ್ನ ಸ್ವಂತ ಬರವಣಿಗೆಯಾಗಿದ್ದು ಇದರ ಯಾವುದೇ ಭಾಗವನ್ನು ಈವರೆಗೆ ಬೇರಲ್ಲೂ ಪ್ರಕಟಪಡಿಸಿಲ್ಲ ಮತ್ತು ಬೇರೆ ಯಾವುದೇ ಪದವಿಗಾಗಿ ಸಲ್ಲಿಸಿಲ್ಲ ಎಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

ದಿನಾಂಕ :
ಸ್ಥಳ : ಬೆಂಗಳೂರು

ಸಹಿ
ಮಾದೇಶ್.ಎನ್.
ಸಂಶೋಧನ ವಿದ್ಯಾರ್ಥಿ



## ದೇವನೂರ ಮಹಾದೇವ

ದೇವನೂರ ಮಹಾದೇವ ಅವರ 'ಎದೆಗೆ ಬಿದ್ದ ಅಕ್ಷರ' ಒಂದು ಅಧ್ಯಯನ

# ಪರಿವಿಡಿ

# ಅಧ್ಯಾಯ : ೧

## ಅಧ್ಯಯನದ ಉದ್ದೇಶ, ಸ್ವರೂಪ ಮತ್ತು ವ್ಯಾಪ್ತಿ

ದೇವನೂರ ಮಹಾದೇವ ದಲಿತ ಬಂಡಾಯ ಸಾಹಿತ್ಯ ಚಳುವಳಿಯ ಹಾಗೂ ಆಧುನಿಕ ಭಾರತೀಯ ಸಂದರ್ಭದ ಅನನ್ಯ ಚಿಂತಕ. ಇವರು ಭಾರತೀಯ ಶ್ರೇಣಿಕೃತ ವರ್ಣವ್ಯವಸ್ಥೆಯ ವಿರುದ್ಧ, ಶೋಷಿತರ ಆತ್ಮ ಸಾಕ್ಷಿಯನ್ನು ಕೆದಕುವ ಹಾಗೆ ಸಮಕಾಲೀನ ಸಮಾಜದಲ್ಲಿ ಸಮಾನತೆಯ ಕನಸಿಗಾಗಿ ಸಹನೆ ಮತ್ತು ತಾಳ್ಮೆಗಳಿಂದ ತಮ್ಮ ಸಾಹಿತ್ಯದ ಮೂಲಕ ಸಾಮಾಜಿಕ ಪರಿವರ್ತನೆ ಮಾಡುವ ಕನಸು ಕಾಣುತ್ತಿರುವ ಅಪರೂಪದ ವ್ಯಕ್ತಿ. ಇದನ್ನು ತಮ್ಮ ಕೃತಿಗಳಾದ ದ್ಯಾವನೂರು, ಒಡನಾಳ, ಕುಸುಮಬಾಲೆ ಹಾಗೂ ಇತರ ಹಲವು ಲೇಖನಗಳಲ್ಲಿ ಸೂಕ್ಷ್ಮವಾಗಿ ಗುರುತಿಸಬಹುದಾಗಿದೆ.

ದೇವನೂರು ಮಹಾದೇವ ಸುದೀರ್ಘ ೪೦ ವರ್ಷಗಳ ಮೌನದ ನಂತರ ಬರೆದಿರುವ 'ಎದೆಗೆ ಬಿದ್ದ ಅಕ್ಷರ' ಇದೀಗ ಸಾಮಾಜಿಕ ಕ್ರಾಂತಿ ಮನಸಾಕ್ಷಿಗಳ ಆತ್ಮಶೋಧನೆಗೆ ತೊಡಗಿರುವ ದಾರ್ಶನಿಕ ಕೃತಿಯಾಗಿ ಗಮನ ಸೆಳೆಯುತ್ತಿದೆ. ಜೊತೆಗೆ ಸಮಾನತೆಯ ಸಮಾಜವನ್ನು ನಿರ್ಮಿಸುವ ಚಿಂತಕರಾದ ಬುದ್ಧ, ಬಸವ, ಅಂಬೇಡ್ಕರ್, ಲೋಹಿಯ, ಮಾರ್ಕ್ಸ್, ಗಾಂಧಿ, ಮಾವೋ ಮುಂತಾದವರ ಚಿಂತನೆಗಳ ಸಾಮರಸ್ಯವನ್ನು ಅರಿತು ಹಾಗೂ ಜಾತಿ ಜಾತಿಗಳ ನಡುವಣ ಸಂಘರ್ಷಗಳನ್ನು ಶಾಂತಿಯಿಂದ ಪರಿಹರಿಸಿಕೊಳ್ಳಬೇಕೇ ಹೊರತು ಹಿಂಸಾಮಾರ್ಗದಲ್ಲಲ್ಲ ಎಂಬುದು ದೇವನೂರು ಮಹಾದೇವರ ನಿಲುವಾಗಿದೆ.

ಪ್ರಸ್ತುತ 'ಎದೆಗೆ ಬಿದ್ದ ಅಕ್ಷರ' ಕೃತಿಯಲ್ಲಿ ತಾವು ಕಂಡ ಸಮಾಜದ ವಾಸ್ತವ ಚಿತ್ರವನ್ನು ಯಾವುದೇ ಕೃತಕ ಅಲಂಕರಣವಿಲ್ಲದೆ ಅತ್ಯಂತ ಸಮರ್ಥವಾಗಿ ತಮ್ಮದೇ ದಾಟಿ ಧೋರಣೆಯ ಕಟ್ಟಿಕೊಡಲು ಯತ್ನಿಸಿದ್ದಾರೆ.

'ಎದೆಗೆ ಬಿದ್ದ ಅಕ್ಷರ' ಕೃತಿ ಡಿಸೆಂಬರ್ ೧೨, ೨೦೧೨ ರಂದು ಬಿಡುಗಡೆ ಆದಂತದ್ದು ಗಮನಾರ್ಹ. ನಂತರದಲ್ಲಿ ಸುಮಾರು ಐದಾರು ಮುದ್ರಣಗಳನ್ನು ಕಂಡಿರುವ ಇದು ಸಹೃದಯಿ ಓದುಗರನ್ನು ವಿಶೇಷವಾಗಿ ಆಕರ್ಷಿಸುವುದರ ಮೂಲಕ ಹೊಸ ಚಿಂತನೆಗೆ ಅವಕಾಶ ಮಾಡಿಕೊಟ್ಟಿದೆ.

ಎದೆಗೆ ಬಿದ್ದ ಅಕ್ಷರ ಯಾಕೆ ಭಿನ್ನವಾಗಿದೆ. ಅದರಲ್ಲಿನ ಚಿಂತನೆಗಳೇನು? ಜಾಗತೀಕರಣದ, ಸಂದರ್ಭಗಳಲ್ಲಿ ಇಂದಿನ ಯುವ ಪೀಳಿಗೆ ಓದಲೇಬೇಕಾದ ಕೃತಿಯೆಂದರೆ ಅದು ಎದೆಗೆ ಬಿದ್ದ ಅಕ್ಷರ. ಈ ಕೃತಿಯ ಓದಿನ ಮೂಲಕ ದಕ್ಕಿಸಿಕೊಳ್ಳುವ ಅರಿವು ಇಂದಲ್ಲ ನಾಳೆ ಫಲ ಕೊಡುವುದು.

"ಎದೆಗೆ ಬಿದ್ದ ಅಕ್ಷರ ಕೃತಿಯನ್ನು ಕೆಲವರು ಕೇಂದ್ರವೇ ಇಲ್ಲದ ಸಂಕಲನ ಎಂದು ಟೀಕಿಸಿದರು. ಇನ್ನೂ ಅನೇಕರು ಇದು ಹಳೆಯ ಸರಕುಗಳನ್ನೆಲ್ಲ ಒಟ್ಟುಗೂಡಿಸಿ ಪ್ರಕಟಿಸುವ

ಅವಶ್ಯಕತೆಯೇ ಇರಲಿಲ್ಲವೆಂದೂ ಹೊಸದೇ ಹೇಳಿಲ್ಲವೆಂದೂ ಹಳೆಯ ಬರಹಗಳನ್ನೇ ರಿಸೈಕಲ್ ಮಾಡಿದ್ದಾರೆಂದೂ ಜರಿದಿದ್ದಾರೆ.[೧]

ಆದರೂ ಇದರೊಳಗಿನ ೮೮ ಲೇಖನಗಳು, ಸಾಮಾಜಿಕ, ಧಾರ್ಮಿಕ, ರಾಜಕೀಯ, ಆರ್ಥಿಕ, ಭಾಷಿಕ ನೆಲೆಯಲ್ಲಿನ ಆಶಯಗಳಲ್ಲಿ ವಿಷಯಗಳನ್ನು ಚರ್ಚಿಸುತ್ತವೆ. ಆದರಿಂದ ಈ ಆಶಯವೇ ಕೃತಿಯ ಮುಖ್ಯಕೇಂದ್ರವೆಂದೂ ಭಾವಿಸಿರುವೆ. ಲೇಖನಗಳ ಪ್ರಮಾಣ ಕಡಿಮೆ ಇದ್ದರೂ ಅದರ ಮೌಲ್ಯ ಮತ್ತು ಪ್ರಸುತ್ತತೆ, ವಾಸ್ತವಿಕತೆಯ ದೃಷ್ಟಿಯಿಂದ ಕಗ್ಗತ್ತಲಿರುವ ಸಮಾಜಕ್ಕೆ ಬೆಳಕಾಗಿ ಬರಲು ಈ ಕೃತಿಯ ಪಾತ್ರ ಕೈ ದೀವಿಗೆಯಂತೆ ದಾರಿ ತೋರಿಸುತ್ತದೆ ಹಾಗೂ ಆಸಮಾನತೆಯ ಬದುಕಿನಲ್ಲಿರುವ ಬಡತನ, ಶೋಷಣೆ, ಒಣಪ್ರತಿಷ್ಠೆ, ಬೂಟಾಟಿಕೆ, ಭ್ರಷ್ಟಾಚಾರ, ದೌರ್ಜನ್ಯ, ಮೌಢ್ಯತೆ, ಕಂದಾಚಾರಗಳು ತುಂಬಿ ತುಳುಕುತ್ತಿರುವ ಇಂತ ವ್ಯವಸ್ಥೆಯನ್ನು ವಿರೋಧಿಸಿರುವ ಎದೆಗೆ ಬಿದ್ದ ಅಕ್ಷರ ಕೃತಿಯನ್ನು ನನ್ನ ಸಂಶೋಧನಾ ವಿಷಯವಾಗಿ ಕೃತಿಯನ್ನು ಆಯ್ದುಕೊಂಡಿರುತ್ತೇನೆ.

'ಎದೆಗೆ ಬಿದ್ದ ಅಕ್ಷರ' ಕೃತಿ ದೇಶದಲ್ಲಿನ ವಿವಿಧ ಸಮಸ್ಯೆಗಳನ್ನು ಚರ್ಚಿಸುತ್ತಲೇ ಸಮತಾವಾದವನ್ನು ಸಾರುತ್ತದೆ. 'ಸರ್ವರಿಗೂ ಸಮಪಾಲು ಸರ್ವರಿಗೂ ಸಮಬಾಳು' ಎನ್ನುವ ಕುವೆಂಪು ವಿಚಾರಧಾರೆಗೆ ಹತ್ತಿರವಾಗಿದ್ದು, ವಿಶ್ವಮಾನವತೆಯೆಡೆಗೆ ಸಾಗುವುದನ್ನು ಕಾಣಬಹುದಾಗಿದೆ. ಹಿಂದೆಯೇ ಸ್ಪಷ್ಟಪಡಿಸಿರುವಂತೆ ಲೋಹಿಯ, ಗಾಂಧಿ, ಜೆ.ಪಿ.ಅಂಬೇಡ್ಕರ್‌ರಂತಹ ನಾಯಕರ ಚಿಂತನೆಗಳನ್ನು ಈ ಕೃತಿಯ ಲೇಖನಗಳು ಕೇಂದ್ರೀಕರಿಸಿಕೊಂಡಿದೆ.

ದೇವನೂರ ಮಹಾದೇವ ದಲಿತರಾದರೂ ದಲಿತರ ಪಕ್ಷಪಾತಿಯಲ್ಲ. ಅವರದು ಸಮನ್ವಯ ದೃಷ್ಟಿ, ವಿಶಾಲವಾದ ಮನೋಭಾವ. ಅವರ ವೈಚಾರಿಕ ಚಿಂತನೆಗಳು ಒಂದು ವರ್ಗಕ್ಕೆ ಸೀಮಿತವಾಗದೇ, ಸಾರ್ವತ್ರಿಕತೆಯ ಅಂಶಗಳನ್ನು ಒಳಗೊಂಡಿವೆ. ಅಂದರೆ ಇಲ್ಲಿನ ಲೇಖನಗಳು ಸಾಮಾಜಿಕ, ಕುಂದುಕೊರತೆಗಳನ್ನು ಎತ್ತಿ ಹಿಡಿಯುತ್ತಲೇ ವಿರೋಧಿಗಳನ್ನು ಚಿಂತನೆಗೆ ಹಚ್ಚುವ ಮತ್ತು ಆತ್ಮಾವಲೋಕನ ಮಾಡಿಕೊಳ್ಳುವಂತೆ ಪ್ರೇರಿಪಿಸುವಷ್ಟು ವೈಚಾರಿಕವಾಗಿವೆ. ಆದ್ದರಿಂದ ಇಂದಿನ ಸಮಾನ ಮನಸ್ಕ ಮನಸ್ಸುಗಳಿಗೆ ಬೇಕಾಗಿರುವುದು ಇಂತಹ ಚಿಂತನೆ ಹಾಗೂ ಇಂತಹ ಓದಾಗಿದೆ.

ಒಟ್ಟಾರೆ 'ಎದೆಗೆ ಬಿದ್ದ ಅಕ್ಷರ' ಕೃತಿಯ ಸ್ವರೂಪ ಶಿಕ್ಷಣದ ಅರಿವು, ಶಿಕ್ಷಣದ ಪರಿಣಾಮಗಳನ್ನು ತಿಳಿಸುತ್ತಾ ಸುಸಂಸ್ಕೃತ ಬದುಕಿನ ದಾರಿದೀಪವೆನಿಸಿದೆ. ಉದಾರ ಮಾನವತವಾದದ ಸ್ವರೂಪವಾಗಿದೆ.

[1] ಕನ್ನಡ ಪ್ರಭ ಪತ್ರಿಕೆ – ಪುಟ ೬ – ಜೂನ್ ೬ –೨೦೧೩

ಈ ಕೃತಿಯ ವ್ಯಾಪ್ತಿಯು ಜಾಗತೀಕರಣ, ಉದಾರೀಕರಣ, ನಗರೀಕರಣ, ಯಾಂತ್ರೀಕರಣ, ಖಾಸಗೀಕರಣ ಹಾಗೂ ಕಾರ್ಪೋರೇಟ್ ಸೆಕ್ಟರ್‌ವರಗೆ ಸಾಗಿದ್ದು ಭಾರತದ ಸ್ಥಿತಿಯನ್ನು ಅನಾವರಣ ಮಾಡುತ್ತದೆ. ಎಲ್ಲಿಯವರೆಗೆಂದರೆ ಭಾರತದ ಸ್ಥಿತಿಗತಿ ತನ್ನನ್ನು ಉಳಿಸಿಕೊಳ್ಳಿ ತಾನೂ ಬದುಕಬೇಕೆಂಬ ಕೂಗು–ಕೂಗುತ್ತಿರುವಂತೆ ಭಾಸವಾಗುತ್ತದೆ. ಈ ಕಾಲದ ಸಾಮಾಜಿಕ ವ್ಯವಸ್ಥೆಯಲ್ಲಿ ಜಾತಿ ಪರಿಸ್ಥಿತಿಯ ದ್ವಂದ್ವಗಳು ಎಲ್ಲಕ್ಕಿಂತ ಹೆಚ್ಚಾಗಿ ಬದುಕನ್ನು ಬದುಕಲಾಗದ ಹೀನಾಯಸ್ಥಿತಿಯನ್ನು ತಲುಪಿರುವ ಜನಸಾಮಾನ್ಯರ ಸ್ಥಿತಿ ಅತ್ಯಂತ ದುರಂತಮಯವಾಗಿದೆ.

ದಲಿತರ ಮೇಲಿನ ದೌರ್ಜನ್ಯ, ಹಲ್ಲೆ, ಕೊಲೆ, ಅವಮಾನ, ಅತ್ಯಾಚಾರಗಳು, ಮೇರೆ ಮೀರಿವೆ. ದ್ವೇಷ ಬಿಟ್ಟು ದೇಶ ಕಟ್ಟು, ಅನ್ನ–ಅಕ್ಷರ ದಾಸೋಹ ಪರಂಪರೆ, ಜಾತ್ಯಾತೀತ ನಿಲುವು ದೂರವೇ ಆಗಿವೆ. ಶ್ರಮಪಡುವವರಿಗಿಂತ ದಲ್ಲಾಳಿಗಳ ಕ್ರೌರ್ಯದ ಬದುಕು, ಮುಂದುವರಿದ ಜನಾಂಗದ ಆಸ್ತಿ, ಅಧಿಕಾರಗಳು ಶಿಕ್ಷಣವನ್ನು ತಮಲ್ಲೇ ಉಳಿಸಿಕೊಳ್ಳುವ ಹುನ್ನಾರಗಳು, ದಲಿತರ ಬದುಕನ್ನು ಅಸಹನೀಯವೆನಿಸಿವೆ. ಇಂತಹ ಸ್ಥಿತಿಯಲ್ಲಿ ದಲಿತರ ಬದುಕಿಗೆ ಬೆಳಕನ್ನು ಚೆಲ್ಲುವ ಸ್ವಾಭಿಮಾನದ ಪ್ರತೀಕವೂ ಆಗಿರುವ 'ಎದೆಗೆ ಬಿದ್ದ ಅಕ್ಷರ' ಕನ್ನನ್ನು ವಿಶೇಷ ಅಧ್ಯಯನಕ್ಕೆ ಒಳಪಡಿಸುವುದಕ್ಕೆ ಅನುವು ಮಾಡಿದೆ.

ದೇವನೂರ ಮಹಾದೇವರ ಚಿಂತನೆಗಳು, ಇಲ್ಲಿನ ಆಶಯಗಳು ಸಾಮಾಜಿಕ ನ್ಯಾಯವನ್ನು ಒತ್ತಿ ಹೇಳುತ್ತವೆ. ಇಲ್ಲಿನ ಚಿಂತನೆಗಳು ಭೂತ, ವರ್ತಮಾನ, ಭವಿಷ್ಯತ್ತನ್ನು ಮೀರಿದ ಎಲ್ಲ ಕಾಲದಲ್ಲಿಯೂ ಸ್ಥಾಯಿಯಾಗಿರಬಹುದಾಗಿವೆ. ಈ ಅರ್ಥದಲ್ಲಿ ಇಲ್ಲಿನ ಚಿಂತನೆಗಳು ಕಾಲಾತೀತವಾಗಿದ್ದು, ಸಹಜವಾಗಿಯೇ ನನ್ನನ್ನು ಹೆಚ್ಚಿನ ಓದಿಗೆ ಒಳಪಡಿಸಲು ಸಾಧ್ಯವಾಗಿದ್ದು, ನನ್ನ ಸಂಶೋಧನೆ ವಸ್ತುವಾಗಿದೆ.

# ಅಧ್ಯಾಯ ೨

## ದೇವನೂರ ಮಹಾದೇವ – ಇತರೆ ಬರಹಗಳು

ಬದುಕಿನ ಅಂತಃಕರಣವನ್ನೇ ಅಕ್ಷರವಾಗಿಸಿದ ಲೇಖಕ ದೇವನೂರರು. ದೇವನೂರರು ಬರೆದದ್ದು ಅಲ್ಪವೆನಿಸಿದರೂ ಕನ್ನಡ ಸಾಹಿತ್ಯದ ಮೇಲೆ ಅಪಾರ ಪ್ರಭಾವ ಬೀರಿದವರು ಮತ್ತು ಚರ್ಚೆಗೆ ಒಳಗಾದವರಾಗಿದ್ದಾರೆ. ದಲಿತರ ನೋವು ನಲಿವುಗಳೇ ಅವರ ಬದುಕು ಬವಣೆಗಳೇ, ಇವರ ಕಥನದ ವಸ್ತುಗಳಾಗಿವೆ. ಯಾವುದೇ ಲೇಖಕರು ಬದುಕಿನ ಬವಣೆಯ ಸಾಹಿತ್ಯ ರಚಿಸಿದರೂ ದಲಿತ ವರ್ಗದವರಿಂದಲೇ ಅಕ್ಷರವಾಗಿಸಿದಾಗ ಅದು ಅಧಿಕೃತವಾಗುತ್ತದೆ. ನೊಂದವರ ನೋವ ನೋಯದವರೆತ್ತ ಬಲ್ಲರಯ್ಯಎನ್ನುವಂತೆ, ದೇವನೂರರು ತಾವೂ ನೊಂದಿದ್ದು, ನೊಂದವರ ಬದುಕಿಗೆ ಹತ್ತಿರವಾಗಿದ್ದಾರೆ. ಹೀಗೆಂದ ಮಾತ್ರಕ್ಕೆ ಎಲ್ಲಿಯೂ ದಲಿತತ್ವವನ್ನು ತುರುಕುವ ಪ್ರಯತ್ನ ಮಾಡಿಲ್ಲ. ಇಂತಹ ಬದುಕನ್ನು ಕಟ್ಟಿಕೊಡುವಲ್ಲಿ ಕಲಾತ್ಮಕವಾಗಿ, ಅತ್ಯಂತ ಪರಿಣಾಮಕಾರಿಯಾಗಿ ಚಿತ್ರಿಸಿದ್ದಾರೆ.

ದೇವನೂರರ ತಂದೆ ನಂಜಯ್ಯನವರು ಪೋಲೀಸ್ ಕಾನ್‌ಸ್ಟೇಬಲ್ ಆಗಿದ್ದರು. ಮೂಲತಃ ನಾಟಕ ಕಲೆಯನ್ನು ಕರಗತ ಮಾಡಿಕೊಂಡಿದ್ದರು. ತಾಯಿ ನಂಜಮ್ಮ ಕೂಡ ಶೋಭಾನೆ ಪದಗಳನ್ನು, ಮಾದೇಶ್ವರನ ಹಾಡುಗಳನ್ನು ಹಾಡುತ್ತಿದ್ದರು. ಹೀಗಾಗಿ ಮಹಾದೇವ ಹುಟ್ಟಿದ್ದು, ಕಲಾವಿದರ ಮನೆಯಲ್ಲಿ ಸಹಜವಾಗಿಯೇ ಪದಗಳು, ಹಾಡಿಕೆ, ನಾಟಕ–ಇಂತಹ ಕಲಾಭಿವ್ಯಕ್ತಿಗಳ ಪರಂಪರೆಯಲ್ಲಿ ಮಹಾದೇವರು ಬೆಳೆದಿದ್ದಾರೆ.

ಪ್ರಸಿದ್ಧ ವಿಮರ್ಶಕರಾದ ಡಾ. ಪ್ರಧಾನ ಗುರುದತ್ತ ಗುರುತಿಸುವಂತೆ, "ಶಿಕ್ಷಣದ ಜೊತೆ ಜೊತೆಯಲ್ಲಿಯೇ ಅವರಲ್ಲಿ ಸಾಹಿತ್ಯದ ಅಭಿವ್ಯಕ್ತಿ ರುಚಿಸಿ ಬರವಣಿಗೆಗಳಲ್ಲಿ ತಲ್ಲೀನರಾಗಿ 'ಗೋಕುಲ' ವಾರಪತ್ರಿಕೆಗಳಲ್ಲಿ ತಮ್ಮ ಕತೆ–ಬರವಣಿಗೆ ಪ್ರಕಟಿಸುತ್ತಿದ್ದರು. ಪಿ.ಯು.ಸಿ.ಯಲ್ಲಿ ವಿಜ್ಞಾನ ವಿಷಯ ಆಯ್ಕೆ ಮಾಡಿಕೊಂಡು ಫೇಲಾದರು. ಕೊನೆಗೆ ಒಂದು ದಿನ ಓದಲಿ ಎಂದು ಅವರ ತಂದೆ ಜೈಲಿನಲ್ಲಿ ಕೂಡಿ ಹಾಕಿದರು. ಇದು ಭೇರ‍್ಯ ಎಂಬ ಊರಲ್ಲಿ"[2] ಅಂತಿಮವಾಗಿ ದೇವನೂರ ಮಹಾದೇವರು ಮೈಸೂರಿನ ಮಹಾರಾಜ ಕಾಲೇಜಿನಿಂದ ಬಿ.ಎ.ಪದವಿ ಹಾಗೂ ಮಾನಸಗಂಗೋತ್ರಿಯ ಕನ್ನಡ ಅಧ್ಯಯನ ಸಂಸ್ಥೆಯಿಂದ ೧೯೭೪ರಲ್ಲಿ ಎಂ.ಎ. ಪದವಿ ಪಡೆಯಲು ಸಾಧ್ಯವಾಯಿತು.

ಶ್ರೀಯುತರು ಸಮಾಜಶಾಸ್ತ್ರದ ಪ್ರಾಧ್ಯಾಪಕರಾಗಿದ್ದ ಸುಮಿತ್ರಬಾಯಿಯವರನ್ನು ತಮ್ಮ ಬಾಳಸಂಗಾತಿಯನ್ನಾಗಿಸಿಕೊಳ್ಳುತ್ತಾರೆ. ಒಮ್ಮೆ ಸುಮಿತ್ರಾಬಾಯಿಯವರು ಸಮಾಜಶಾಸ್ತ್ರ ಪಠ್ಯ ಮಾಡುವಾಗ ವಿಧವೆಯರಿಗೆ ಸಮಾಜದಲ್ಲಿ ಯಾರು ಬಾಳು ಕೊಡುತ್ತಾರೆ ಎಂದಾಗ ಮಹಾದೇವ ತಾವು ಮುಂದೆ ಬರುವುದಾಗಿ ಹೇಳಿಕೊಂಡು ಸುಮಿತ್ರಬಾಯಿಯವರನ್ನು ಮದುವೆಯಾಗಿರುವುದಕ್ಕೆ ಅವರ ಮನಸಾಕ್ಷಿ ಕಾರಣವಾಗಿದೆ.

---

[2]ದೇವನೂರು ಮಹಾದೇವ – ಡಾ.ಪ್ರಧಾನ ಗುರುದತ್ತ – ಪುಟ ೧೪

ಇವರ ಮೇಲೆ ಪ್ರಭಾವ ಬೀರಿದ ಸಾಹಿತಿಗಳೆಂದರೆ ಬೇಂದ್ರೆ, ಕುವೆಂಪು, ಯು.ಆರ್.ಅನಂತಮೂರ್ತಿ, ಲಂಕೇಶ, ಚಂದ್ರಶೇಖರ ಕಂಬಾರ, ಪೂರ್ಣಚಂದ್ರ ತೇಜಸ್ವಿ ಅಲನಹಳ್ಳಿ ಕೃಷ್ಣ, ಟಾಲ್‌ಸ್ಟಾಯ್, ಶೇಕ್ಸ್‌ಪೀಯರ್ ಮುಂತಾದವರಾಗಿದ್ದಾರೆ.

ವಿದ್ಯಾರ್ಥಿಯಾಗಿದ್ದಾಗಲೇ ದೇವನೂರರು ಸಮಾಜವಾದಿ ಯುವಜನ ಸಭಾದ ಕಾರ್ಯಕರ್ತರಾಗಿದ್ದರು. ಕೆಲವು ಗೆಳಯರೊಂದಿಗೆ ಸೇರಿ ವಿದ್ಯಾರ್ಥಿ ಸಮುದಾಯಕ್ಕೆ **'ನರ'** ಪತ್ರಿಕೆಯನ್ನು ಪ್ರಕಟಿಸುತ್ತಿದ್ದರು.

ಇವರ ಮೊದಲ ಕತೆ 'ನಂಬಿಕೆಯ ನೆಂಟ' ಪ್ರಕಟವಾದದ್ದು ೧೯೬೮ ರಲ್ಲಿ ಪಿ.ಯು.ಸಿ. ಹಂತದಲ್ಲಿದ್ದಾಗ. ನಂತರ ಏಪ್ರಿಲ್ ೬ ರ ದುರಂತದ ಲೇಖನ ಬರೆದರು. ನಂತರ ೧೯೬೯ ರಿಂದ ೭೩ ರ ಕಾಲಾವಧಿಯಲ್ಲಿ 'ದ್ಯಾವನೂರು' ಎಂಬ ೭ ಕತೆಗಳ ಸಂಕಲನ ರಚಿಸಿದರು.

ದ್ಯಾವನೂರು ಕತೆಯಲ್ಲಿ ಒಟ್ಟು ೭ ಕತೆಗಳಿದ್ದು, ಈ ಕತೆಗಳಲ್ಲಿ ಪ್ರಮುಖವಾಗಿ ಮಹಾದೇವ ಸಹಜವಾದ ಪ್ರೀತಿ ಮತ್ತು ಜೀವನ ಪ್ರೇಮ ಕುರಿತ ಸೂಕ್ಷ್ಮವನ್ನು ಚಿತ್ರಿಸಿದ್ದಾರೆ.

**'ಮಾರಿಕೊಂಡವರು'** ಕತೆಯಲ್ಲಿ ಬರುವ ಬೀರ, ಕೆಂಪಿ, ಕಿಟ್ಟಪ್ಪನವರ ಪಾತ್ರಗಳಲ್ಲಿ ಒಂದು ಕುಟುಂಬದ ಬದುಕಿನಲ್ಲಿನ ಬಡತನದ ಪರಿಸರವನ್ನು ಪರಿಚಯಿಸುತ್ತಾರೆ. ಒಂದು ಕಡೆ, ತನ್ನನ್ನು ತಾನು ಮಾರಿಕೊಂಡು ಗಂಡನಿಗೆ ದ್ರೋಹವೆಸಗುವ ಲಕ್ಷ್ಮೀಯ ಪಾತ್ರ, ಇನ್ನೊಂದಡೆ ಬಡತನ, ಅಸಹಾಯಕತೆಯ ವ್ಯವಸ್ಥೆಯಲ್ಲಿ ಬೀರನ ಕುಡಿಯುವ ಚಟ, ಮತ್ತೊಂದೆಡೆ ಲಂಕೇಶರು ಗುರುತಿಸಿರುವಂತೆ, ಇನ್ನೊಂದೆಡೆ "ಬಡವರನ್ನು ಶ್ರೀಮಂತರು ತಮ್ಮ ಸ್ವಾರ್ಥಕ್ಕೆ ಬಳಸಿಕೊಳ್ಳುವುದರೊಂದಿಗೆ ಅವರನ್ನು ಲೈಂಗಿಕ ತೃಪ್ತಿಗೆ ಬಳಸಿಕೊಳ್ಳುವ ಅಪಾಪೋಲಿ ಹುಡುಗ–ಕಿಟ್ಟಪ್ಪನವರ"[3] ವ್ಯಕ್ತಿತ್ವವನ್ನು ಸೊಗಸಾಗಿ ಪರಿಚಯಿಸಿರುವುದನ್ನು ಕಾಣಬಹುದಾಗಿದೆ.

**'ಗ್ರಸ್ತರು'**–ಕತೆಯಲ್ಲಿ ಬರುವ ಹುಡುಗ ಮತ್ತು ತಾಯಿ ಪಾತ್ರ ಹಾಗೆಯೇ ಗೌಡರ ಜಾತಿಯ ನಾಗವ್ವ ಮತ್ತು ಗೌಡರು, ಕಷ್ಟಪಟ್ಟು ಗೌಡರಿಂದ ಸಾಲ ಪಡೆದು ಹುಡುಗನಿಗೆ ಸ್ವಾಮಿಗಳ ಹತ್ತಿರ ಕೆಲಸಕ್ಕೆ ಸೇರಿಸಿದ್ದು, ಇವೆಲ್ಲವೂ ಕಲಾತ್ಮಕವಾಗಿ ಮೂಡಿವೆ. ಆದರೆ ಹುಡುಗ ತನ್ನ ಮನಸ್ಸಿಲ್ಲದ ಮನಸ್ಸಿನಲ್ಲಿ ಕೆಲಸ ಬಿಟ್ಟು ಬಂದ ತದನಂತರ ತಾಯಿಯ ಖಾಯಿಲೆಯಾಗಿರುತ್ತದೆ. ಇದು ಒಂದು ಕಡೆಯಾದರೆ, ಮತ್ತೊಂದುಕಡೆ ಗೌಡರ ಸಾಲ ತೀರಿಸುವ ಋಣ. ಹೀಗೆ ಕತೆಯಲ್ಲಿ ಗ್ರಹಚಾರ ಸರಿಯಿಲ್ಲದಿದ್ದರೆ ಏನೂ ಮಾಡಿದರೂ ಸರಿ ಹೋಗಲ್ಲ. ಇದು ತಾನೊಂದು ಬಗೆದರೆ ದೈವವೊಂದು ಬಗೆದಂತೆ ಎಂದು ವಿವರಿಸಲು ಯತ್ನಿಸಿರುವಂತೆ ಕಾಣುತ್ತದೆ.

**ಇನ್ನು 'ಒಂದು ದಹನದ ಕತೆ' ಆತ್ಮ ಕಥನದಂತಿದೆ :** ಒಬ್ಬ ತರುಣ ಹಾಗೂ ದೊಡ್ಡಪ್ಪನವರ ಆಶ್ರಯದಲ್ಲಿ ಬೆಳೆದು ಕೊನೆಗೆ ಜಾತಿಯಲ್ಲದ ಜಾತಿಯ ಹೆಣ್ಣು ಕರಕೊಂಡು ಬಂದು ಅಜ್ಜಿಯೊಂದಿಗೆ ೧೨ ವರ್ಷ ಬದುಕುತ್ತಾನೆ. ಅಜ್ಜಿ ತಾನು ಸಾಯುವ ಕಾಲದಲಿ ತನ್ನ

---

[3]ದೇವನೂರು ಮಹಾದೇವ – ಡಾ.ಪ್ರಧಾನ ಗುರುದತ್ತ – ಪುಟ ೧೫

ನೆಲದಲ್ಲಿ ಸಾಯಬೇಕೆಂಬ ಹಠದಿಂದ ಕಮಲಿ ಮಾತಿನಂತೆ ಊರಿಗೆ ಹಿಂದಿರುಗಿದ್ದಾಗ ಎದುರಾದ ಪಂಚಾಯ್ತಿಗಳ ಸಮಸ್ಯೆ ಕೊನೆಗೆ ತಾನೇ ಅಜ್ಜಿಯ ಹೆಣವನ್ನು ಶವಸಂಸ್ಕಾರ ಮಾಡುವಾಗ ಮನೆಯಲ್ಲಿದ್ದ ಗಳುಗಳನ್ನು ಎಳೆದು ದಹನ ಮಾಡಿದ ಕತೆಯಲ್ಲಿನ ಮಾರ್ಮಿಕತೆಯು ಸಾಮಾಜಿಕವಾದ ಬಹಿಷ್ಕಾರಗಳನ್ನು ನೆನಪಿಸುತ್ತವೆ.

**'ದತ್ತ' ಕತೆ ಮತ್ತೊಂದು ಬಗೆಯದಾಗಿದೆ** ; ಆನಂದ ಎಂಬ ಹುಡುಗನು ೧೬ ವರ್ಷಗಳಿಂದ ದತ್ತು ಸ್ವೀಕರಿಸಿದ ಮನೆಯಲ್ಲೇ ಸದಾ ತನ್ನ ತಂಗಿ ತಮ್ಮಂದಿರನ್ನು ನೆನಪು ಮಾಡಿಕೊಳ್ಳುವುದು. ಜೊತೆಗೆ ತಾನೇ ಮನೆಬಿಟ್ಟು ಮತ್ತೇ ಸೇರುವ ಹಂಬಲದೊಂದಿಗೆ ಕೆಟ್ಟ ಚಟ ಸ್ವಭಾವವನ್ನು ಬೆಳಸಿಕೊಳ್ಳುವುದು. ಇದರಿಂದ ಕೊನೆಗೆ ಆಸಹಾಯಕತೆಗೊಳಗಾಗಿ ಮನೆ ಬಿಟ್ಟು ಹೋಗುವ ಸಂದರ್ಭ ಅತ್ಯಂತ ಮಾರ್ಮಿಕವಾಗಿ ಚಿತ್ರಿತಗೊಂಡಿದೆ.

**'ಡಾಂಬರು ಬಂದದು'** ; ಕತೆಯಲ್ಲಿನ ಪ್ರಮುಖ ಪಾತ್ರಗಳೆಂದರೆ ಪಟೇಲರು, ಹುಡುಗರಾದ ಲಕುಮ, ರಾಜಪ್ಪ, ಶಂಭು, ಮಾದು ಇವರ ನಡುವಿನ ಮನಸ್ತಾಪವನ್ನು ಕುರಿತದ್ದಾಗಿದೆ. ಊರಿನ ಪಟೇಲ ಊರಿಗೆ ರಸ್ತೆ ಮಾಡಿಸಿ ಆದರಲ್ಲಿ ಬಂದ ಲಾಭದಲ್ಲಿ ದೇವಸ್ಥಾನ ಕಟ್ಟಿಸುವ ತೀರ್ಮಾನ ಮಾಡಿದ್ದರೆ, ವಿದ್ಯಾವಂತ ವಿದ್ಯಾರ್ಥಿಗಳು ಮೊದಲು ಮೂಲ ಸೌಕರ್ಯಗಳಿಗಾಗಿ ಪ್ರತಿಭಟನೆ ಮಾಡಿ ಅದು ಸಂಘರ್ಷಕ್ಕೆ ತಲುಪಿ, ಕೊನೆಗೆ ವಿದ್ಯಾರ್ಥಿಗಳ ಎದುರಿಗೆ ಪಟೇಲ ಮೌನವಾಗುವ ಸಂದರ್ಭವವನ್ನು ಕಾಣುತ್ತೇವೆ. ಒಟ್ಟಾರೆ ಈ ಕತೆಯಲ್ಲಿ ಆಧುನಿಕತೆಯ ಪ್ರವೇಶವಾಗುತ್ತಲೇ ಅದುವರೆಗೂ ಇದ್ದಂತಹ ಶಾಂತಿ ನೆಮ್ಮದಿಗಳು ಹಾಳಾಗುವುದನ್ನು ಕತೆ ಮಾರ್ಮಿಕವಾಗಿ ಕಟ್ಟಿಕೊಡುತ್ತದೆ.

**'ಮೂಡಲ ಸೀಮೇಲಿ ಕೊಲೆಗಿಲೆ ಮುಂತಾಗಿ'** ; ಕತೆ ರಂಗಪ್ಪ ಹಾಗೂ ಆತನ ಹೆಂಡ್ತಿ ಮಕ್ಕಳ ಉಪವಾಸ ಹಾಗೂ ಆಹಾರ ಹುಡುಕುವ ಅಲೆದಾಟವನ್ನು ಕೇಂದ್ರ ವಸ್ತುವಾಗಿಸಿಕೊಂಡಿದೆ. ಕತೆಗೆ ಗೌಡರೇ ದೇವರು. ಒಂದು ದಿನ ದುಡಿದರೆ ಊಟ, ಇಲ್ಲವಾದರೆ ಊಟವಿಲ್ಲ. ಹಸಿವಿನಿಂದ ಬಳಲುವ ಕುಟುಂಬ, ಕೊನೆಗೆ ಆಸಹಾಯಕನಿಂದ ಲೈಟು ಕಂಬ ಎತ್ತಿಸುವ ಪರಿಸ್ಥಿತಿ. ಹಾಗೆಯೇ ಜೋಳ ಕೇಳಲು ಬಂದಾಗ ಗೌಡರ ಮನೆಯಲ್ಲಿ ಗೌರವ್ವ ಸೌದೆ ಸೀಳಿಸುವ ಕೆಲಸದಲ್ಲಿ ರಂಗಪ್ಪ ಮೇಲೆಳಲೇ ಇಲ್ಲ. ಇಲ್ಲಿ ಪ್ರತಿಭಟನೆ ಸಿಟ್ಟು ಇಲ್ಲ ಬದಲಿಗೆ ರಂಗಪ್ಪನ ಆತ್ಮಗೌರವ ಹಸಿವು ಎಲ್ಲದಕ್ಕೂ ಒಪ್ಪಿಕೊಳ್ಳುವ ಸಜ್ಜನಿಕೆಯಿದೆ.

**'ಅಮಾಸ'** ಕತೆಯ ಆಮಾಸನಿಗೆ ಯಾಕೆ ಈ ಹೆಸರು ಬಂತು? ಕಪ್ಪಾಗಿದ್ದದ್ದಕ್ಕೊ ಇಲ್ಲ ಅಮಾವಾಸೆಯ ದಿನ ಹುಟ್ಟಿದ್ದಕ್ಕೋ ಇದು ಲೇಖಕರನ್ನು ಕಾಡಿದೆ. ಅವನು ನಡೆದಾಡುವ ವೇಳೆಗೆ ಹೆತ್ತವರು ತೀರಿಕೊಂಡಿದ್ದರು. ಮಾರಿಗುಡಿಯೇ ಅವನ ಆಶ್ರಯವಾಗಿದ್ದು ದಿಕ್ಕುದಿಸೆಯಿಲ್ಲದ ಅನಾಥನಾಗಿದ್ದಾನೆ. ಆದರೆ ಮಾರಿಗುಡಿಯಲ್ಲಿ ಒಂದು ಹಳೇ ತಲೆಯಿದ್ದು, ಆತನೇ ಕುರಿಯಯ್ಯನಾಗಿದ್ದಾನೆ. ಕುರಿಯಯ್ಯ ಗೌಡರ ಹಳ್ಳಿಯ ಕುರಿಗಳನ್ನು ಕಾಯುತ್ತಿದ್ದು, ಅಮಾಸ ಕುರಿಯ್ಯಯನಿಗೆ ಸಹಾಯಕನಾಗಿದ್ದ. ಮಠದಲ್ಲಿ ಬೆಲ್ಲು ಹೊಡೆದ ತಕ್ಷಣವೇ ಹಿಟ್ಟು ಸಾರು ತಂದು ಕೊಡುತ್ತಿದ್ದ. ಒಂದು ದಿನ ಹಬ್ಬದಲ್ಲಿ ಹುಲಿಯಾವೇಶ ಧರಿಸಿ ಕುಣಿಯುತ್ತಿದ್ದ ಹುಡುಗ ಯಾರು ಎಂಬುದು ಊರಿನ ಗೌಡರ ಚಿಂತೆಯಾಗುತ್ತದೆ. ಹುಲಿಯಾಸದಲ್ಲಿ ತಬ್ಬಲಿ

ಆಮಾಸ ಊರಿನವರಿಂದ ಸೈ ಎನ್ನಿಸಿಕೊಳ್ಳುತ್ತಾನೆ. ಒಂದು ಸುಡುಗಾಡಲ್ಲಿದ್ದ ತೆಂಗಿನಕಾಯಿ ದೊಡ್ಡ ಮರವಾಗಿ ಬೆಳೆಯುವಂತೆ ಅಮಾಸ ಕೂಡ ಮಾರುಗುಡಿಯಲ್ಲಿ ಬೆಳೆಯುವ ಕಥಾನಕ ಮನೋಜ್ಞವಾಗಿ ಮೂಡಿಬಂದಿದೆ.

ಈ ಹಿನ್ನೆಲೆಯಲ್ಲಿನ ದೇವನೂರು ಕಥಾಸಂಕಲನ ಸ್ವಾತಂತ್ರ್ಯ ಬಂದ ಮೊದಲ ಮೂರು ದಶಕಗಳಲ್ಲಿನ ಗ್ರಾಮೀಣ ಸಮಾಜದ ಸೂಕ್ಷ್ಮಗಳನ್ನು, ಬದಲಾಗುತ್ತಿರುವ ದಿನ-ಮಾನಗಳಿಗೆ ಅಭಿಮುಖವಾಗುತ್ತಿರುವ ಸಂದರ್ಭವನ್ನು, ಹಾಗೆಯೇ ಅಲ್ಲಿಯ ಪಾತ್ರಗಳ ಸ್ಪಂದನಗಳನ್ನು ಅತ್ಯಂತ ಪ್ರಾಮಾಣಿಕವಾಗಿ ಕಟ್ಟಿಕೊಡುವಲ್ಲಿ ಯಶಸ್ವಿಯಾಗಿರುವುದನ್ನು ಕಾಣಬಹುದು.

ಡಾ॥ ಕರೀಗೌಡ ಬೀಚನಹಳ್ಳಿಯವರ ಮಾತುಗಳನ್ನು ಇಲ್ಲಿ ಸ್ಮರಿಸಬಹುದು. ಅವರು ಹೇಳುವಂತೆ, "ಗ್ರಾಮ ಸಮಾಜದ ಮುಖಂಡತ್ವದ ಸಮಾಗಮಗಳು ಇಲ್ಲಿ ಆಗಿವೆ. ಶಿಕ್ಷಣ ಕಲಿಯಲು ಪ್ರಯತ್ನಿಸಿ ಅದು ಸಿಗದೆ ಹೋದಾಗಿನ ಎಡಬಿಡಂಗಿಗಳಾದ ಯುವಕರ ಸ್ಥಿತಿ ಇಲ್ಲಿದೆ. ಇದರೊಂದಿಗೆ ಸಮಾಜದ ಕಟ್ಟಳೆ, ಮುಲಾಜು, ಸಹನೆ ಮತ್ತು ಅವಮಾನಗಳನ್ನು ಈ ಬರವಣಿಗೆ ಒಟ್ಟಿಗೆ ಕೊಡುತ್ತದೆ ಎನ್ನುವ ಡಾ॥ ಕರೀಗೌಡ ಬೀಚನಹಳ್ಳಿಯವರ ಮಾತುಗಳಲ್ಲಿ ಸತ್ಯವಿದೆ. ಜಾತಿ ಧರ್ಮ ಆಸ್ತಿ ಈ ಮೂರರ ಶೋಧನೆಯ ಜೊತೆಗೆ ಶೋಷಣೆ, ಅಸಮಾನತೆಗಳು ತೊಲಗಿ ವ್ಯಕ್ತಿ ಸ್ವಾತಂತ್ರ್ಯ ಮಾನವೀಯತೆ ನೆಲೆಗೊಳ್ಳಬೇಕು ಎಂಬುದು ಮಹಾದೇವರ ಕಥನದ ಆಶಯವಾಗಿದ್ದು, ಅದನ್ನು ಲೇಖಕರು ಅತ್ಯಂತ ಸಮರ್ಥವಾಗಿ ನಿರೂಪಿಸಿದ್ದಾರೆ ಎನ್ನುವ ಕರೀಗೌಡ ಬೀಚನಹಳ್ಳಿಯವರ ಮಾತುಗಳು ವಾಸ್ತವಕ್ಕೆ ಹತ್ತಿರವಾಗಿವೆ".[೪]

**'ಒಡಲಾಳ'** ಇದೊಂದು ನೀಳ್ಗತೆಯಾಗಿದ್ದು, ಈ ಕೃತಿಯು ೧೯೭೮ರಲ್ಲಿ ಪ್ರಕಟವಾಗಿದ್ದು ಗಮನಾರ್ಹ. ಇಲ್ಲಿ ಕೆಳವರ್ಗದ ಜನರ ಬದುಕು, ಅವರಲ್ಲಿ ಮಡುಗುಟ್ಟಿರುವ ಆಸೆ, ಅಭಿಮಾನ, ಅಸಹಾಯಕತೆಗಳೇ, ಕಾದಂಬರಿಯ ವಸ್ತುವಾಗಿದೆ. ಇದು ನಾಟಕವಾಗಿಯೂ ರೂಪಾಂತರಗೊಂಡಿದೆ. ಈ ಕೃತಿಗೆ ಕಲ್ಕತ್ತೆಯ ಭಾರತೀಯ ಭಾಷಾ ಪರಿಷತ್ತಿನ ಎಚ್.ಇ.ಜಿ. ಬಿಲ್ವಾರ ಪ್ರಶಸ್ತಿ ಧಕ್ಕಿರುವುದು ಗಮನಾರ್ಹವಾದ ಸಂಗತಿಯಾಗಿದೆ.

ಕೃತಿಯ ಆಯಾಮಗಳತ್ತ ಗಮನ ಹರಿಸಿದಾಗ ಸಾಕವ್ವ ಈ ಹಟ್ಟಿಯ ಯಜಮಾನಿ ತನ್ನ ದುಡಿಮೆಯಿಂದ ನಾಲ್ಕು ಕಂಬಗಳ ತೊಟ್ಟಿ ಹಟ್ಟಿ ಕಟ್ಟಿದ್ದೇನೆ ಎಂಬ ಹೆಮ್ಮೆ ಅವಳದು. ಐದು ಮಕ್ಕಳ ತಾಯಿಯಾದ ಅವಳಿಗೆ – ಮೂರು ಗಂಡು ಮಕ್ಕಳಿದ್ದು, ಅವರಲ್ಲಿ ಕಾಳಣ್ಣ, ಸಣ್ಣಯ್ಯ, ಗುರುಸಿದ್ದ, ಇಬ್ಬರು ಹೆಣ್ಣು ಮಕ್ಕಳಿದ್ದು, ಗೌರವ್ವ ಹಾಗೂ ಪುಟ್ಟಗೌರಿಯರಾಗಿದ್ದಾರೆ. ಕತೆಯಲ್ಲಿ ಮುಖ್ಯವಾಗಿ ಹುಂಜದ ಪ್ರಸಂಗ, ದಲಿತರ ಬದುಕಿನಲ್ಲಿ ಎಷ್ಟು ಅನಿವಾರ್ಯವಾದುದು ಎಂಬುದನ್ನು ಸಂಕೇತಿಸುತ್ತದೆ.

[4] ಶತಮಾನದ ಸಣ್ಣ ಕಥೆಗಳು – ಡಾ.ಕರಿಗೌಡನ ಬೀಚನಹಳ್ಳಿ – ಪುಟ – ೧೦೩

"ಸಾಕವ್ವ ತನ್ನ ಮನೆಯ ದೇವರಿಗೆ ಬಿಟ್ಟಿದ್ದ ಹುಂಜ ಕಣ್ಮರೆಯಾದಾಗ ಆಕೆ ಎಲ್ಲರನ್ನೂ ಬೈಯುವುದು ಭಾಷೆಗೆ ಸಂಸ್ಕೃತಿಯನ್ನು ಪರಿಚಯಿಸುವುದರೊಂದಿಗೆ ಸಾಕವ್ವನ ಪ್ರತಿರೋಧ ಪ್ರತಿಭಟನೆಯನ್ನು ತಿಳಿಸುತ್ತದೆ".[5] ಜೊತೆಗೆ ಅದನ್ನು ಮೊಮ್ಮಗ ಶಿವನೊಂದಿಗೆ ಹುಡುಕಿ ನಿರಾಶೆಯಿಂದ ಮನೆಗೆ ಬರುವುದು. ಮನೆಯಲ್ಲಿ ಕೆಲಸವಿಲ್ಲದೆ ಉಣಲಿಕ್ಕೆ ಊಟವಿಲ್ಲದೆ ಮನೆಯಲ್ಲಿ ಸಂಕಟ ವೇದನೆ ಶುರುವಾಗುತ್ತದೆ. ಕೊನೆಗೆ ಕಾಳಣ್ಣ ಬದುಕನ್ನು ಬದುಕುವುದಕ್ಕಾಗಿ ವಿಧಿಯಿಲ್ಲದೆ ಕಡಲೇಕಾಯಿ ಮೂಟೆಯನ್ನು ಸಾಹುಕಾರ ಎತ್ತಪ್ಪಗೌಡನ ಮನೆಯಲ್ಲಿ ಕಳ್ಳತನ ಮಾಡುವುದು. ಪಿ.ಸಿ.ರೇವಣ್ಣ ಎಲ್ಲವನ್ನು ನೋಡುವುದು. ಅಂತಿಮವಾಗಿ ಹಸಿವೆಂಬ ಕಿಚ್ಚಿಗೆ ಕಡಲೆಕಾಯಿ ತಿಂದು ಗುರುತು ಸಿಗದಂತೆ ಮಾಡುವುದು, ದಲಿತರ ಜೀವನಗಾಥೆಗೆ ಹಿಡಿದ ಕನ್ನಡಿಯಾಗಿದೆ. ಇನ್ನೊಂದೆಡೆ ತಾವು ಕಷ್ಟದಲ್ಲಿದ್ದರೂ ಕಾಳಣ್ಣನ ಹೆಂಡ್ತಿ ಪಕ್ಕದ ಮನೆಯವರಿಗೆ ಕಡಲೇಕಾಯಿ ಕೊಡುವುದು ಅವಳಲ್ಲಿನ ಉದಾರಗುಣಕ್ಕೆ ಸಾಕ್ಷಿಯಾಗಿದೆ. ಇದು ಒಂದು ರೀತಿಯಲ್ಲಿ ಹಂಚಿ ಉಂಡರೆ ಹಸಿವಿಲ್ಲ ಎಂಬ ವಾಸ್ತವವನ್ನು ಅರಿವಿಗೆ ತಂದುಕೊಡುತ್ತದೆ. ಕೊನೆಗೆ ಪೋಲೀಸ್ ಇನ್ಸ್‌ಪೆಕ್ಟರ್ ಮನೆಯನ್ನು ಜಪ್ತಿ ಮಾಡುವ ಪ್ರಸಂಗ ಮನೆಯಲ್ಲಿ ಎಲ್ಲೂ ಸಾಕ್ಷಿ ಸಿಗದೇ ಇರುವ ಸಂದರ್ಭ ಅಂತಿಮವಾಗಿ ಕತ್ತಲೆಯಲ್ಲಿ ಒಂದು ಹುಂಜ ಅವರ ಕಣ್ಣಿಗೆ ಬೀಳುವುದು. ಜೀಪಿನಲ್ಲಿ ಅದನ್ನು ಹೊತ್ತೊಯ್ಯುವುದು, ಒಟ್ಟಾರೆ ಕಾಳಣ್ಣನ ಬದಲಿಗೆ ಹುಂಜದ ಬಲಿಯಾಗುವ ಪ್ರಸಂಗವನ್ನು ಸೊಗಸಾಗಿ ವಿವರಿಸಿದ್ದಾರೆ. ಹಸಿವು ಎಂಬ ಪೆಡಂಭೂತವನ್ನು ಇಲ್ಲಿನ ದಲಿತರು ಅತ್ಯಂತ ಯಶಸ್ವಿಯಾಗಿ ಎದುರಿಸುತ್ತಾರೆ. ಅದು ಅವರ ಜೀವನ ಕತೆಯೂ ಹೌದೆಂಬುದನ್ನು ದೇವನೂರರು ಇಲಾತ್ಮಕವಾಗಿ ವರ್ಣಿಸಿರುವುದು ನಿಜಕ್ಕೂ ಮೆಚ್ಚಬೇಕಾದ ಸಂಗತಿಯಾಗಿದೆ.

ಒಡಲಾಳದ ಜೀವಾಳವೇ ಸಾಕವ್ವ, ಕೊನೆಗೆ ಪೋಲೀಸ್‌ರಿಂದಲೇ ಎಲೆ ಅಡಿಕೆಗೆ ಕಾಸು ಕೇಳುವ ಪ್ರಸಂಗ, ಜೊತೆಗೆ ತನ್ನ ಮಗ ಕದ್ದ ಕಳ್ಳತನ ಆಪಾದನೆ ಹೋಗಲಾಡಿಸಲು ಹುಂಜವನ್ನೇ ಕೊಡುವುದು, ಅವರಲ್ಲಿನ ಅಸಹಾಯಕತೆಗೆ ಹಿಡಿದ ಕನ್ನಡಿಯಾಗಿದೆ.

**ಕುಸುಮಬಾಲೆ:**

ಕುಸುಬಬಾಲೆ ೧೯೮೮ರಲ್ಲಿ ಪ್ರಕಟಗೊಂಡ ೭೭ ಪುಟಗಳ ಅತ್ಯಂತ ಕಿರು ಕಾದಂಬರಿ. ಇದು ನಾಲ್ಕು ತಲೆಮಾರುಗಳ ಕಥೆ. ಅಕ್ಕಮಹಾದೇವಮ್ಮ, ಅವಳ ಮಗ ಯಾಡ, ಅವನ ಮಗ ಸೋಮಪ್ಪ. ಅವನ ಮಗಳು ಕುಸುಮ. ಹೀಗೆ ನಾಲ್ಕು ತಲೆಮಾರುಗಳಲ್ಲಿ ಹರಿಯುತ್ತದೆ. ಈ ಕಥೆ ನಿರೂಪಣೆ ಅಲ್ಲಲ್ಲಿ ಮುಖ್ಯವಾಗಿ ತಲೆಮಾರಿನಿಂದ ತಲೆಮಾರಿಗೆ ಬದಲಾಗುತ್ತ ಹೋಗುತ್ತದೆ.

ಕುಸುಮಬಾಲೆಯಲ್ಲಿ ಜೋತಮ್ಮಗಳು ಹೇಳುವ ಕಥೆ, ಮಂಚವು ನಿರೂಪಿಸುವ ಕಥೆ – ಎರಡೂ ಸಹ ಜಾನಪದ ಕತೆಗಳಂತಿವೆ.

---

[5] ಯಾರ ಜಪ್ತಿಗೂ ಸಿಗದ ನವಿಲುಗಳು – ಪಿ. ಚಂದ್ರಿಕಾ – ಪುಟ – ೫೩

ಈ ಕಾದಂಬರಿಯಲ್ಲಿ ಸಾರ್ವಕಾಲಿಕವೂ ಸಾರ್ವತ್ರಿಕವೂ ಆದ ಸತ್ಯದ ಆಯಾಮವಿದೆ. ಅದು ಗಂಡು ಹೆಣ್ಣುಗಳ ನಡುವಣ ಲೈಂಗಿಕ ಆಕರ್ಷಣೆಯೇ ಆಗಿದೆ. ಇದು ಪರಸ್ಪರ ಸಾಮಾನ್ಯವಾಗಿ ಜಗತ್ತಿನ ಎಲ್ಲಾ ಸಮುದಾಯಗಳಲ್ಲೂ "ಯಾರು ಯಾರನ್ನಾದರೂ ಕೂಡಲಿ ಬಿಡು? ಎನ್ನುವ ಲೈಂಗಿಕ ಸ್ವಾತಂತ್ರ್ಯ ಇಲ್ಲಿದೆ".[6]

ಕುಸುಮಬಾಲೆಯಲ್ಲಿ–ಚೆನ್ನ ಕೊಲೆಯಾಗುವ ಹಾಗೆ, ಚದುರಂಗದ ಕಾದಂಬರಿಯಲ್ಲಿ ಗಾಡಿ ಹೊಡೆಯುವ ತರುಣರನ್ನು ಶಿಕ್ಷಿಸಲು ಊರಿನವರು ಮುಂದಾಗುತ್ತಾರೆ. ಅದರಂತೆ ಸುಪ್ರಸಿದ್ಧ ವಸಿಷ್ಠ ಮುನಿಗಳ ವಿಚಾರದಲ್ಲಿ ಆರುಂಧತಿ ಆದಿಜಾಂಬವನ ಮಗಳು. ಆದರೆ ಸಪ್ತರ್ಷಿ ಋಷಿಗಳಲ್ಲಿ ಒಬ್ಬನಾಗಿರುವ ವಸಿಷ್ಠನಿಂದ ನೋವನ್ನು ಅನುಭವಿಸಿ ನಿಂದನೆಗೆ ಒಳಗಾಗುತ್ತಾಳೆ. ಆದರಂತೆಯೇ ಇಲ್ಲಿ ಬರುವ ಹೊಲಗೇರಿಯ ಬದುಕಿನ ವಿವರಗಳು ಕಣ್ಣಿಗೆ ಕಟ್ಟುವಂತಿವೆ. ವಿಶೇಷ ಎಂದರೆ ದೇವನೂರು ನೇರವಾಗಿ ಯಾರ ಆರ್ಥಿಕ ದುಃಸ್ಥಿತಿಯನ್ನು ವಾಚ್ಯವಾಗಿ ಹೇಳುವುದಿಲ್ಲ.

**ಕುಸುಮಬಾಲೆ** ಕೃತಿಯನ್ನು ಕುರಿತು ಒಬ್ಬೊಬ್ಬ ವಿಮರ್ಶಕರ ಪ್ರತಿಕ್ರಿಯೆಗಳು ಒಂದೊಂದು ರೀತಿಯಲ್ಲಿ ಮೂಡಿಬಂದಿವೆ. ರಾಜೇಂದ್ರಚೆನ್ನಿಯವರು ಅಲ್ಲಿನ ಭಾಷೆ ಮತ್ತು ಶೈಲಿಯ ಪ್ರಯೋಗ ಶೀಲತೆ ಅತಂತ್ಯ ಕುತೂಹಲಕಾರಿಯಾಗಿದೆ ಎನ್ನುತ್ತಾರೆ. ಅದೇ ಎಸ್.ಎಸ್.ರಘುನಾಥ್ ಅವರು ಕುಸುಮಬಾಲೆ ಒಂದು ಪ್ರದೇಶದ ಒಂದು ಜನಾಂಗದ ಮಾತಿನ ಎಲ್ಲಾ ಸಾಧ್ಯತೆಗಳನ್ನು ಒಳಗೊಂಡಿದೆ ಎನ್ನುತ್ತಾರೆ. ಇನ್ನು ಡಾ.ಜಿ.ಎಸ್.ಅಮೂರ್ ಅವರು ಕುಸಮಬಾಲೆ ಕೃತಿ ಒಂದು ಸಮುದಾಯದ ಸಂಸ್ಕೃತಿಯ ಸಮಗ್ರ ಗ್ರಹಿಕೆಯಾಗಿದೆ ಎನ್ನುತ್ತಾರೆ. ಹೀಗೆ ಒಬ್ಬೊಬ್ಬರು ತಮ್ಮದೇ ಆದ ಗ್ರಹಿಕೆಯ ಸ್ವರೂಪವನ್ನು ಕಟ್ಟಿಕೊಡಲು ಯತ್ನಿಸಿದ್ದಾರೆ.

ಶಿವರಾಮಯ್ಯ.ಪಿ. ಇವರು "ಕುಸುಮಬಾಲೆ ಶೀಲ, ಅಶ್ಲೀಲ ಮಡಿ–ಮೈಲಿಗೆಯೆಂಬ ಹಾಗೂ ಪವಿತ್ರ ಅಪವಿತ್ರವೆಂಬ ಎಲ್ಲ ಪರಿಕಲ್ಪನೆಯನ್ನು ಮೀರಿ ಜೀವಪರ ಪ್ರೀತಿಯಿಂದ ಮಿಡಿಯುತ್ತದೆ ಎನ್ನುತ್ತಾರೆ. ಮಿತ್‌ಗಳನ್ನು ಒಡೆಯುವ, ಹೊಸ ಮಿತ್‌ಗಳನ್ನು ಸೃಷ್ಟಿಸುವ, ಹಾಗೆಯೇ ನಂಜನಗೂಡಿನ ಸುತ್ತಮುತ್ತಲ ಸ್ಥಳೀಯ ಭಾಷೆಯನ್ನು ಸಾಹಿತ್ಯದ ಭಾಷೆಯಾಗಿ ಕಂಡುಕೊಳ್ಳುವ ಮೂಲಕ ಸಮಕಾಲೀನ ಕನ್ನಡ ಸಾಹಿತ್ಯದಲ್ಲಿ ಆದು ತನ್ನದೇ ಆದ ಸ್ಥಾನವನ್ನು ಸ್ಥಾಪಿಸಿಕೊಂಡಿದೆ"[7]–ಎನ್ನುತ್ತಾರೆ. ಈ ಮಾತಿನಲ್ಲಿಯ ಗ್ರಹಿಕೆಯ ಸೂಕ್ಷ್ಮಗಳು ಸಮಗ್ರ ಕಥನವನ್ನು ಕುರಿತದ್ದಾಗಿದ್ದು, ವಾಸ್ತವಕ್ಕೆ ಹತ್ತಿರವಾಗಿದೆ.

ಡಾ.ಹಾಮಾನಾಯಕ್‌ರ ನುಡಿಗಳು ದೇವನೂರರನ್ನು ಮತ್ತೂ ಎತ್ತರಕ್ಕೆ ಕೊಂಡೊಯ್ಯುತ್ತವೆ. ಅವರು ಹೇಳುವಂತೆ, "ಮಹಾದೇವರವರು ಸ್ವಲ್ಪವೇ ಬರೆದರೂ ಅವರು ಪಡೆದಷ್ಟು ಪ್ರಸಿದ್ಧಿಯನ್ನು ಕನ್ನಡದ ಬೇರಾವ ಲೇಖಕರು ಪಡೆದಿಲ್ಲ, ಪಡೆದರೂ ನಾನು

[6] ದೇವನೂರ ಮಹಾದೇವ – ಡಾ.ಪ್ರಧಾನ ಗುರುದತ್ತ – ಪುಟ ೯೭

[7] ಪ್ರಜ್ಞೆ – ಶಿವರಾಮಯ್ಯ.ಪಿ.ಪುಟ–೪–೧೯೯೩

ಕಾಣೆ"[೮] –ಎನ್ನುವ ಮಾತಿನಲ್ಲಿ ದೇವನೂರರ ಸತ್ವ ಏನು ಎನ್ನುವುದು ಅರಿವಿಗೆ ಬಾರದೇ ಇರದು.

ಎಸ್.ಎಸ್.ಹಿರೇಮಠ್‌ರವರು ಕುಸುಮಬಾಲೆಯನ್ನು ಕುರಿತು ಹೀಗೆ ಹೇಳುತ್ತಾರೆ. ಅವರು ಹೇಳುವಂತೆ, ಕುಸುಮಬಾಲೆ "ವರ್ಗ ವರ್ಣಗಳ ಸಂಘರ್ಷದ ಕಥೆಯನ್ನು ಹೇಳುತ್ತಲೇ ಚಿತ್ರವನ್ನು ಮೂಡಿಸುತ್ತದೆ, ಹಾಡುತ್ತದೆ"[೯]– ಎನ್ನುತ್ತಾರೆ, ಈ ಹಿನ್ನೆಲೆಯಲ್ಲಿ ದೇವನೂರು ಮಹಾದೇವರ ಕಾದಂಬರಿ ಕುಸುಮಬಾಲೆ ಒಂದು ಕಿರು ಕಾದಂಬರಿ ಎಂದು ಕರೆಯಬಹುದಾಗಿದೆ. ಸರಿಯಾಗಿ ಈ ಕೃತಿಯನ್ನು ಬಣ್ಣಿಸಲು ಶಬ್ದಗಳು ದೊರೆಯುವುದಿಲ್ಲ– ಎನ್ನುವ ಕೀರ್ತಿನಾಥ ಕುರ್ತಕೋಟಿಯವರು, "ಈ ಕೃತಿ ಕತೆಯನ್ನೂ ಹೇಳುತ್ತದೆ. ಆದರ ಜೊತೆಗೆ ಬಣ್ಣಿಸುತ್ತದೆ, ಹಾಡುತ್ತದೆ. ಚಿತ್ರಗಳನ್ನು ಮೂಡಿಸುತ್ತದೆ. ಸಂವಹನದಲ್ಲಿ ಹತ್ತು ಮಾಧ್ಯಮಗಳನ್ನು ಉಪಯೋಗಿಸುತ್ತಲೇ ಅಥವಾ ಆ ಕಾರಣಕ್ಕಾಗಿಯೇ ಗೊಂದಲವನ್ನು ಎಬ್ಬಿಸುತ್ತದೆ"[೧೦] –ಎನ್ನುವ ಮಾತು ಅರ್ಥಪೂರ್ಣವಾಗಿದೆ.

ಕಾದಂಬರಿಯಲ್ಲಿನ ಕುಸುಮಬಾಲೆ ಈಕೆ ಎರಡು ಸಂದರ್ಭಗಳಲ್ಲಿ ಕಾಣಿಸಿಕೊಳ್ಳುತ್ತಾಳೆ. ಒಂದು ಬಾಣಂತಿಯಾಗಿ, ಮತ್ತೊಂದು ಭೂತ ಬಿಡಿಸಿಕೊಂಡವಳಾಗಿ. ಇದು ಕಾದಂಬರಿ ನಿರ್ವಹಣೆಗೆ ಸಂಬಂಧಿಸಿದ ಒಂದು ಮುಖ್ಯ ಸಮಸ್ಯೆಯಾಗಿದೆ. ಕಾದಂಬರಿಯಲ್ಲಿ ಬರುವ ಲೈಂಗಿಕ ಸಂಬಂಧಗಳ ಪ್ರಶ್ನೆ, ಧರ್ಮರಾಯನ ಸಂಸಾರ, ಮೈಮನಗಳ ಸುಳಿಯಲ್ಲಿ, ವೈಶಾಖ ಮತ್ತು ಪ್ರಗತಿಪರಶೀಲರ ಕೃತಿಗಳಿಗಿಂತ ಇಲ್ಲಿ ಭಿನ್ನ ಆಯಾಮ ಪಡೆದಿದೆ.

ಕುಸುಮಬಾಲೆ ಕಥಾವಸ್ತುವಿನ ದೃಷ್ಟಿಯಿಂದ, ಭಾಷಾ ಶೈಲಿಯ ದೃಷ್ಟಿಯಿಂದ, ವಿಶಿಷ್ಟವೆನಿಸಿದ್ದು, ರಂಗದ ಮೇಲೆಯೂ ಹಲವಾರು ಯಶಸ್ವಿ ಪ್ರದರ್ಶನಗಳನ್ನು ಕಂಡಿದೆ. ಕುಸುಮಬಾಲೆಯಲ್ಲಿ ಬಳಸಿರುವ ಭಾಷೆ ವಿಶಿಷ್ಠ ಬಗೆಯದಾಗಿದ್ದು, ನಂಜನಗೂಡಿನ ಪರಿಸರದ ದಲಿತರ ಉಪಭಾಷೆಯಲ್ಲೇ ಇಡೀ ವೃತ್ತಾಂತವನ್ನು ನಿರೂಪಿಸಿದ್ದಾರೆ.

ದೇವನೂರರು ಘರ್ಷಣೆಗೆ ಇಳಿಯದೆ ಪ್ರತಿಭಟನೆ ಮಾಡದೆ ಹೇಳಬೇಕಾದುದೆಲ್ಲವನ್ನೂ ಹೇಳಿಬಿಡುತ್ತಾರೆ. ಹಿಂಜರಿಯುವಿಕೆಯ ಪ್ರತಿಭಟನೆಗಳು ಒಂದು ರೂಪವಿರಬಹುದು. ಗಾಂಧಿ ಚಿತ್ರವನ್ನು ದಲಿತ ಜನಾಂಗ ಬಹಿಷ್ಕರಿಸಿದಾಗ ದೇವನೂರರು ಬೆಂಗಳೂರಿಗೆ ಬಂದು ಗಾಂಧಿ ಚಲನಚಿತ್ರ ನೋಡಿದ್ದನ್ನು ಒಂದು ಕಡೆ ಸ್ಮರಿಸುತ್ತಾರೆ. ಆ ಮೂಲಕ ಅವರಿಗೆ ಗಾಂಧಿ ಅಂಬೇಡ್ಕರರ ಚಿಂತನೆಗಳನ್ನು ಬೆಸೆಯಲು ಸಾಧ್ಯವಾಗುತ್ತದೆ.

ಕಾಲಕ್ಕೆ ಕಟ್ಟು ಬಿದ್ದು ಬರೆಯುವುದು ಅವರ ಜಾಯಮಾನವಲ್ಲ. ಪುಟ ತುಂಬಿಸುವ ಹೆಬ್ಬಯಕೆ ಅವರದಲ್ಲ. ಅವರ ಬರಹವೇನಿದ್ದರೂ ಒಂದು ತರಹದ ಏಕಾಂತ–ಧ್ಯಾನವಾಗಿದೆ.

---

[8] ಸಂಪ್ರತಿ – ಡಾ.ಹಾ.ಮಾ.ನಾಯಕ – ಪುಟ ೩೬–೧೯೮೫

[9] ಸಂಕ್ರಮಣ ಸಂಪುಟ ಸಂಚಿಕೆ – ೧೧ – ಎಸ್.ಎಸ್.ಹೀರೆಮಠ–ಪುಟ – ೨೯–೧೯೯೪

[10] ನೂರಮರ – ನೂರ ಸ್ವರ – ಕೀರ್ತಿನಾಥ ಕುರ್ತುಕೋಟಿ – ಪುಟ –೧೧೦–೧೯೯೮

ಬರೆಯುವುದು ಅವರಿಗೆ ಒಂದು ಬಗೆಯ ತಲ್ಲಣವಾಗಿದ್ದು, ಬದುಕನ್ನು ಬಿಚ್ಚಿಡಬೇಕೆಂಬ ಮಾನವ ಪ್ರೀತಿಯಿಂದ ಅದನ್ನು ಅಕ್ಷರಕ್ಕಿಳಿಸಬೇಕೆಂಬ ತೀವ್ರ ತುಡಿತ ಹಾಗೂ ತಹತಹಿಕೆಯಿರುವುದುನ್ನು ಕಾಣುತ್ತೇವೆ. ಇದೆಲ್ಲವನ್ನೂ ಮೀರಿದಂತೆ ದಲಿತರಲ್ಲಿಯೇ ಇರಬಹುದಾದ ಎಡಗೈ ಬಲಗೈಯವರನ್ನು ಒಂದುಗೂಡಿಸಬೇಕೆಂಬ ಕಾಳಜಿಯಿಂದ ಮೂಡಿ ಬಂದ ಅವರ ಬರಹವನ್ನು ಓದಿದಾಗ-ಮೈ ಝುಂ ಎನ್ನುತ್ತದೆ.

ಮಹಾದೇವರವರು ಬದುಕನ್ನು ವಿಶಿಷ್ಠ ರೀತಿಯಲ್ಲಿ ನೋಡುತ್ತಾರೆ. ಹೀಗಾಗಿಯೇ ಅವರದು ಕೇವಲ ದಲಿತ ಸಾಹಿತ್ಯ ಅಲ್ಲ. ಅದು "ಮಾನವ ಸಾಹಿತ್ಯವಾಗಿದೆ". ಇತ್ತೀಚಿಗೆ ಕೃಷಿಯಲ್ಲಿ ತಮ್ಮ ಆಸಕ್ತಿ ಮೂಡಿಸಿ ಬಿಡುವಿನ ವೇಳೆ ಸರ್ವೋದಯ ಕರ್ನಾಟಕ ಪಕ್ಷವನ್ನು ಬಲಪಡಿಸುವ ಹವಣಿಕೆಯ ಹಂತದಲ್ಲಿದ್ದಾರೆ. ಶ್ರೀಯುತರು ತಮಗೆ ಬಂದಂತಹ ಮೈಸೂರಿನ ವಿ.ವಿ.ಗೌರವ ಡಾಕ್ಟರೇಟ್ ಪದವಿಯನ್ನು ನಿರಾಕರಿಸಿದ್ದು ಅವರ ಸರಳ ಸಜ್ಜನಿಕೆಗೆ ಸಾಕ್ಷಿಯಾಗಿದೆ.

ಮಹಾದೇವರವರು ತಮ್ಮ ಸಾಹಿತ್ಯದಲ್ಲಿ ಭಾವ ನಿರಪೇಕ್ಷ ಅಭಿವ್ಯಕ್ತಿಗೆ ಒತ್ತು ಕೊಟ್ಟವರು. ಕಥೆಯಿಂದ ಹೊರಗೆ ನಿಂತು ಸಾಮಾಜಿಕ ಘಟನೆಗಳನ್ನು ಸಾಕ್ಷಿ, ಅನುಭವ ಪ್ರಜ್ಞೆಯಿಂದ ನಿರೂಪಿಸುತ್ತಾರೆ. ಇವರಿಗೆ ದಲಿತರ ನೋವಿನ ಬಗ್ಗೆ ತೀವ್ರತರವಾದ ಕಾಳಜಿಯಿದೆ. ಉಳ್ಳವರ ಸಾಂಸ್ಕೃತಿಕ ಮೌಲ್ಯಗಳನ್ನು ನಿರಾಕರಿಸುವ ಮಟ್ಟಿಗೆ ಈ ನೋವು ಅವರ ಕಥಾ ಸಾಹಿತ್ಯದಲ್ಲಿ ತೀಕ್ಷ್ಣವಾಗಿದೆ.

ಈ ಹಿನ್ನೆಲೆಯಲ್ಲಿ ಮಹಾದೇವರ ಕಥೆಗಳ ಕೇಂದ್ರಬಿಂದು ತತ್ಕಾಲೀನ ಸಮಾಜವಾಗಿದೆ. ಅದರಲ್ಲೂ ಜಾತಿ ವ್ಯವಸ್ಥೆಯ ತರ-ತಮಭಾವಗಳು ಅವರನ್ನು ಕಾಡಿದ್ದು, ಶ್ರೇಣೀಕೃತ ಸಮಾಜದಿಂದ ದೀನದಲಿತ ಸಮುದಾಯ ಅನುಭವಿಸಿರಬಹುದಾದ ನೋವು, ಸಂಕಟ, ವ್ಯಥೆ, ಅವಮಾನ- ಮುಂತಾದವುಗಳನ್ನು ಮನಮಿಡಿಯುವಂತೆ ಕಟ್ಟಿಕೊಟ್ಟಿರುವುದನ್ನು ಅವರ ಬಹುತೇಕ ಕತೆಗಳು ಸ್ಪಷ್ಟಪಡಿಸುತ್ತವೆ.

**ಅಡಿ ಟಿಪ್ಪಣಿಗಳು:**

೧. ದೇವನೂರ ಮಹಾದೇವ – ಡಾ.ಪ್ರಧಾನಗುರುದತ್ತ – ಪುಟ – ೧೫

೨. ದೇವನೂರು ಮಹಾದೇವರ ಕೃತಿಗಳ ಕುರಿತು – ಪಿ.ಲಂಕೇಶ್ – ಪುಟ – ೧೧

೩. ಶತಮಾನದ ಸಣ್ಣ ಕಥೆಗಳು – ಡಾ.ಕರಿಗೌಡನ ಬೀಚನಹಳ್ಳಿ – ಪುಟ – ೧೦೩

೪. ಯಾರ ಜಪ್ತಿಗೂ ಸಿಗದ ನವಿಲುಗಳು – ಪಿ.ಚಂದ್ರಿಕಾ – ಪುಟ – ೫೩

೫. ದೇವನೂರು ಮಹಾದೇವ – ಡಾ.ಪ್ರಧಾನ ಗುರುದತ್ತ – ಪುಟ ೯೭

೬. ಪ್ರಜ್ಞೆ – ಶಿವರಾಮಯ್ಯ.ಪಿ.–ಪುಟ–೦೪–೧೯೯೩

೭. ನೂರು ಮರ ನೂರು ಸ್ವರ – ಕೀರ್ತಿನಾಥ ಕುರ್ತುಕೋಟಿ – ಪುಟ –೧೦–೧೯೯೮

೮. ಸಂಪ್ರತಿ – ಡಾ.ಹಾ.ಮಾ.ನಾಯಕ್ – ಪುಟ–೩೬–೧೯೮೫

೯. ಸಂಕ್ರಮಣ ಸಂಪುಟ – ಸಂಚಿಕೆ – ೧೧–ಎಸ್.ಎಸ್.ಹಿರೇಮಠ–ಪುಟ ೨೯–೧೯೯೪

೧೦. ಯಾರ ಜಪ್ತಿಗೂ ಸಿಗದ ನವಿಲುಗಳು – ಸಂ.ಪಿ.ಚಂದ್ರಿಕಾ – ಪುಟ – ೧೮೭

# ಅಧ್ಯಾಯ ೩

## 'ಎದೆಗೆ ಬಿದ್ದ ಅಕ್ಷರ' ಕೃತಿಯ ಆಯಾಮಗಳು

'ಎದೆಗೆ ಬಿದ್ದ ಅಕ್ಷರ' ಕೃತಿ ಡಿಸೆಂಬರ್ ೧೨-೨೦೧೨ ರಂದು ಬಿಡುಗಡೆಯಾಗಿದ್ದನ್ನು ಹಿಂದೆಯೇ ಸ್ಮರಿಸಲಾಗಿದೆ. ಈ ಕೃತಿಯಲ್ಲಿ ಸುಮಾರು ೪೦ ವರ್ಷಗಳ ಸುದೀರ್ಘವಾದ ಸಾಹಿತ್ಯಗಳ ಲೇಖನ, ಪ್ರತಿಕ್ರಿಯೆ ಅವರು ನಡೆಸಿದ ಸಂದರ್ಶನಗಳು ಮಾತುಕತೆ, ಚಿಂತನೆಗಳು, ಸಾಮಾಜಿಕ ಸಂದರ್ಭದ ನಿಷ್ಠೂರತೆಗಳು, ಸರ್ಕಾರದ ಆಡಳಿತದ ವೈಫಲ್ಯ, ಧಾರ್ಮಿಕ ಮೌಢ್ಯತೆ ಹಾಗೂ ಇನ್ನಿತರ ಅಂಶಗಳನ್ನು ಒಟ್ಟುಗೂಡಿಸಿ ಒಂದು ಸಮಗ್ರವಾದ ಕೃತಿಯನ್ನು ರೂಪಿಸಲಾಗಿದೆ. ವಾಸ್ತವಿಕತೆಯನ್ನು ಅರ್ಥ ಮಾಡಿಕೊಳ್ಳುವ ವಿಶ್ಲೇಷಿಸುವ ದೇವನೂರ ಮಹಾದೇವರ ಬರಹಗಳ ಈ ಸಂಕಲನವೇ 'ಎದೆಗೆ ಬಿದ್ದ ಅಕ್ಷರ' ಈ ಕೃತಿಯಲ್ಲಿ ಸುಮಾರು ೮೮ ಲೇಖನಗಳ ೭ ಘಟಕಗಳಿವೆ. ಇದು ಒಂದು ರೀತಿಯ ಉತ್ಖನನ ಗ್ರಂಥವೆಂದರೆ ತಪ್ಪಾಗಲಾರದು. ಈ ಹಿನ್ನೆಲೆಯಲ್ಲಿ ಇದೊಂದು ಸಮಾಜಕ್ಕೆ ಒಂದು ಹೊಸ ಬೆಳಕಾಗಿದೆ.

ಎದೆಗೆ ಬಿದ್ದ ಅಕ್ಷರದಲ್ಲಿನ ೭ ಘಟಕಗಳಲ್ಲಿ ವಿವಿಧ ವಿಷಯ ಪ್ರಸ್ತಾಪಿಸಿದ್ದಾರೆ.

| | | | |
|---|---|---|---|
| ೧. | ಮನವ ಕಾಡುತ್ತಿದೆ | – | ೧೮ ಲೇಖನಗಳಿವೆ |
| ೨. | ಒಳನೋಟ | – | ೨೦ ಲೇಖನಗಳಿವೆ |
| ೩. | ಮತಾಂಧರ ಮೆದುಳೊಳಗೆ | – | ೦೯ ಲೇಖನಗಳಿವೆ |
| ೪. | ಹೀಗೇ ಮುಂದುವರೆದರೆ | – | ೧೪ ಲೇಖನಗಳಿವೆ |
| ೫. | ಮುತ್ತು ಮುಳುಗ ಮತ್ತು ಇತರ | – | ೧೨ ಲೇಖನಗಳಿವೆ |
| ೬. | ಮುಖಾಮುಖಿ | – | ೦೫ ಲೇಖನಗಳಿವೆ |
| ೭. | ಸಮಾನತೆಯ ಕನಸನ್ನು ಮತ್ತೇ ಕಾಣುತ್ತಾ | – | ೧೦ ಲೇಖನಗಳಿವೆ |

ಈ ಮೇಲಿನ ಘಟಕಗಳನ್ನು ಇಲ್ಲಿನ ಅಧ್ಯಯನದ ಅನುಕೂಲಕ್ಕಾಗಿ ೫ ವಿಭಾಗಳಾಗಿ ವಿಂಗಡಿಸಬಹುದಾಗಿದೆ. ಅವುಗಳೆಂದರೆ:–

ಸಾಮಾಜಿಕ
ರಾಜಕೀಯ
ಸಾಂಸ್ಕೃತಿಕ
ಧಾರ್ಮಿಕ
ಭಾಷಿಕ

ಎಂಬುದಾಗಿ ವರ್ಗೀಕರಿಸಿದ್ದು, ಅವುಗಳಲ್ಲಿನ ಒಟ್ಟು ಗ್ರಹಿಕೆಯ ಚಿಂತನೆಯನ್ನು ಇಲ್ಲಿ ಕಾಣಬಹುದು.

# ಅಧ್ಯಾಯ–೩

## ಸಾಮಾಜಿಕ ನೆಲೆ

೧. **ಮೂರ್ಛಾವಸ್ಥೆಯಲ್ಲಿ ಕಾರುಣ್ಯ:** ಡಾ.ಅಶೋಕ ಪೈಯವರೊಂದಿಗಿನ ಲೇಖಕರ ಬುದ್ಧನ ಕಾರುಣ್ಯ ಎಂತಹವರನ್ನೂ ಮರಳುಗೊಳಿಸುತ್ತದೆ. ಇದರಲ್ಲಿ ಪ್ರಕೃತಿಯ ಯಾವ ಜೀವಿಯೂ ತನ್ನಷ್ಟಕ್ಕೆ ತಾನಿಲ್ಲವೆಂಬುದನ್ನು ಸಾರುತ್ತದೆ. ಒಂದು ಜೀವಿಗೆ ಆಗುವ ದುಃಖದುಮ್ಮಾನ ಇತರ ಜೀವಿಗಳ ಮೇಲು ಪರಿಣಾಮ ಬೀರುತ್ತದೆ. ಉದಾ: ಕಣ್ಣರಿಯದಿದ್ದರೂ ಕರುಳರಿಯದೇ ಎನ್ನುವಂತೆ ಪ್ರಕೃತಿ ಮಾತೆಯ ಮಕ್ಕಳಾದ ನಮ್ಮೆಲ್ಲರ ಭಾವನೆಯೂ ಒಂದೆಯಾಗಿದೆ. ಜಗತ್ತಿನ ಎಲ್ಲ ಸೃಷ್ಟಿಯಲ್ಲೂ ಪ್ರಕೃತಿಯದೆ. ಜಗತ್ತಿನ ಯಾವ ಮೂಲೆಯಲ್ಲಿ ತೊಂದರೆಯಾದರೂ ಅದು ಎಲ್ಲರಿಗೂ ಅನ್ವಯಿಸುತ್ತದೆ. ಇದು ನಿಮಿತ್ತವಾಗಿ ಜಾಗತೀಕರಣದ ಪ್ರಭಾವ ಎಲ್ಲರನ್ನೂ ತಲುಪಬೇಕಿತ್ತು. ಆದರೆ ಅದು ಸಾಧ್ಯವಾಗದಾಗಿ ಕೆಲವೇ ಕೆಲವು ಸಮುದಾಯವನ್ನು ತಲುಪುವಲ್ಲಿ ಯಶಸ್ವಿಯಾಗಿದ್ದು, ಸಮಾಜದ ತಳಸಮುದಾಯವನ್ನು ತಲುಪುವಲ್ಲಿ ವಿಫಲವಾಗಿದೆ. ಇದು ನಿಮಿತ್ತವಾಗಿ ಕೆಲವು ವರ್ಗ ಸುಖದ ಸುಪ್ಪತ್ತಿಗೆಯಲ್ಲಿವೆ, ಮತ್ತೆ ಕೆಲವು ವರ್ಗ ದಯಾನೀಯ ಸ್ಥಿತಿಯಲ್ಲಿ ಇರುವುದು ಲೇಖಕರಿಗೆ ಅಸಹನೀಯವೆನಿಸಿದ್ದು, ಎಲ್ಲರಲ್ಲೂ ಮೊಳಗಬೇಕಾದ ಕಾರುಣ್ಯವನ್ನು, ನಿರೀಕ್ಷಿಸುತ್ತಾರೆ.

೨. **ಕೇವಲ ಮನುಷ್ಯನಾಗುವುದೆಂದರೆ:** ಈ ಶೀರ್ಷಿಕೆಯಲ್ಲಿ ಉಡುಪಿಯ ರಥಬೀದಿಯಲ್ಲಿರುವ ಶ್ರೀಕೃಷ್ಣನು ತಿರುಗಿ ನಿಂತು ಕನಕನಿಗೆ ಕಿಂಡಿಯಲ್ಲಿ ದರ್ಶನ ಕೊಟ್ಟ ದೃಶ್ಯ ಯಾರ್‍ಯಾರಿಗೆ ಹೇಗೆ ಕಾಣಬಹುದೆಂಬ ಸೂಕ್ಷ್ಮವನ್ನು ಮಹಾದೇವರು ಈ ರೀತಿಯಲ್ಲಿ ಊಹಿಸುತ್ತಾರೆ. ಮಾದ್ವ – ಕುರುಬ ಇಬ್ಬರು ಮೇಲು ಕೀಳೆಂಬ ಜಾತಿಯಲ್ಲಿ ಹುಟ್ಟಿ ಬಚ್ಚಲಲ್ಲಿ ಹುಳುಗಳಾಗಿ ವಿಲ ವಿಲ ಒದ್ದಾಡುತ್ತಿರುತ್ತಾರೆ. ಒಟ್ಟಾರೆ ಮನುಷ್ಯನ ಮೇಲರಿಮೆ – ಕೀಳರಿಮೆಗಳೆರಡರ ದುರಂತವನ್ನು ಇಲ್ಲಿ ಕಾಣಬಯಸಿದ್ದಾರೆ. ಆದರೂ ಮನುಷ್ಯನಾಗಿ ಹುಟ್ಟಿದ ಮನುಷ್ಯ ಮನುಷ್ಯನಾಗೇ ಉಳಿಯಲು ಎಷ್ಟೊಂದು ಕಷ್ಟ ಪಡಬೇಕಾಗುತ್ತದೆ ಎಂಬುದನ್ನು ಮಾರ್ಮಿಕವಾಗಿ ಹೇಳುತ್ತಲೇ ಮಾನವೀಯ ಮೌಲ್ಯಗಳಿಗೆ ಒತ್ತು ಕೊಡುವುದನ್ನು ಕಾಣಬಹುದು.

೩. **ಕೊಳಕು ಎಲ್ಲಿದೆ:** ಈ ಲೇಖನ ನಮ್ಮಲ್ಲಿನ ನಮ್ಮತನವನ್ನು ಅರಿಯುವಂತಹ ಲೇಖನವಾಗಿದೆ. ಇಂದಿನ ಮಕ್ಕಳೇ ನಾಳಿನ ಪ್ರಜೆಗಳಾಗುವ ಸಂದರ್ಭದಲ್ಲಿ ವರ್ತಮಾನದ ಸಂದರ್ಭದಲ್ಲಿಯೇ ಅವರ ಮನಸ್ಸಿನಲ್ಲಿನ ಸಮಾಜದ ಅಂತರಗಳನ್ನು ಹೋಗಲಾಡಿಸಿ ಅವರಿಗೆ ವಿಶಾಲವಾದ ದೃಷ್ಟಿಕೋನ ಬೆಳೆಯುವಂತೆ ಶೈಕ್ಷಣಿಕ ಪಠ್ಯಗಳ ಮೂಲಕ ಮಾಡಬೇಕಾಗಿದೆ. ಎಲ್ಲರೂ, ನಮ್ಮ ನಮ್ಮ ಜವಾಬ್ದಾರಿ, ಕರ್ತವ್ಯಗಳನ್ನು ಪ್ರೀತಿಯಿಂದ ಅರಿವಿಗೆ ತಂದುಕೊಂಡಾಗ ಸಮಾಜದಲ್ಲಿ ಕೊಳಕೆಂಬುದು ಇರುವುದಿಲ್ಲ. ಲೇಖಕರು ತಮ್ಮ ಪತ್ನಿ ಸಾವಿತ್ರಿಬಾಯಿ ಪೌರಕಾರ್ಮಿಕನನ್ನು ಅವನ ಕಾಯಕವನ್ನು ಕುರಿತು ಇದು ಕಷ್ಟವೆನ್ನಿಸುವುದಿಲ್ಲವೇ ಎಂದಾಗ, ಅದಕ್ಕೆ ಅವನ ಪ್ರತಿಕ್ರಿಯೆ ನಿರೀಕ್ಷೆ ಮೀರಿದ್ದಾಗಿದೆ. ಅವನು ಹೇಳುವಂತೆ, ಯಾಕಮ್ಮಾ ಕಷ್ಟ

ಕಹಿ, ನನ್ನ ಮಕ್ಕಳದು ಅಂತ ಅಂತ್ಕಂಡ್ರಾಯ್ತು ಎನ್ನುವಲ್ಲಿ ಅವನು ತನ್ನ ಇಡೀ ಬದುಕನ್ನು ಜೀರ್ಣಿಸಿಕೊಂಡ ಬಗೆ ಯಾವುದು ಎಂಬುದು ಸ್ಪಷ್ಟವಾಗುತ್ತದೆ. ಆದ್ದರಿಂದ ಇಷ್ಟಪಟ್ಟು ಮಾಡಬೇಕು, ಓದಬೇಕೇ ಹೊರತು ಕಷ್ಟಪಟ್ಟರೆ ಸಾಧ್ಯವಾಗುವುದು ಯಾವುದೂ ಇಲ್ಲವಾಗಿದೆ. ಮಕ್ಕಳಿಗೆ ಬಾಲ್ಯ ಶಿಕ್ಷಣದಲ್ಲೇ ಸಾರ್ವಜನಿಕ ಸ್ವಚ್ಛತೆ ಹಾಗೂ ಚಪ್ಪಲಿ ತಯಾರಿಕೆಯನ್ನು ಕುರಿತ ಕರಕುಶಲತೆಯನ್ನು ಶಾಲಾ ಕಾಲೇಜುಗಳ ಪಠ್ಯಗಳಲ್ಲಿ ಅಳವಡಿಸಬೇಕು. ಹೀಗಾದಾಗ ಮಾತ್ರ ವಿದ್ಯಾವಂತನಾದವನು ತನ್ನನ್ನೂ ಶುಚಿಗೊಳಿಸಿಕೊಳ್ಳುತ್ತಲೇ ವಿಶಾಲ ಜಗತ್ತಿಗೆ ತೆರೆದುಕೊಳ್ಳುವುದಕ್ಕೆ ಸಾಧ್ಯವಾಗುತ್ತದೆ.

೪. **ಅಸ್ಪೃಶ್ಯನಾಗುವುದೆಂದರೆ:** ಭಾರತದ ಸಂದರ್ಭದಲ್ಲಿ ಅಸ್ಪೃಶ್ಯನಾಗಿ ಹುಟ್ಟುವುದೆಂದರೆ ಅತ್ಯಂತ ಅವಮಾನಕರವಾದುದಾಗಿದೆ. ಆದರೆ ದಕ್ಷಿಣ ಆಫ್ರಿಕಾದಲ್ಲಿ ಅದು ಇನ್ನೂ ಕರಾಳರೂಪದ್ದು. ಒಮ್ಮೆ ದಕ್ಷಿಣ ಆಫ್ರಿಕಾದ ಲೇಖಕ ಚಿನುವ ಅಚಿಬೆ ಮೈಸೂರಿಗೆ ಬಂದಾಗಿನ ಒಂದು ಹೇಳಿಕೆಯನ್ನು ಉಲ್ಲೇಖಿಸುತ್ತಾರೆ. ಆತನ ಹೇಳಿಕೆ ಎಂದರೆ ಆಫ್ರಿಕಾದಲ್ಲಿ ದೇವರ ಮಕ್ಕಳಾದ ಕಪ್ಪು ಜನರ ರಕ್ತ ಭೂಮಿಗೆ ಬಿದ್ದರೆ ಅದು ಪಾಪವಾಗುತ್ತದಂತೆ. ಆದರೆ ಭಾರತದಲ್ಲಿ ಹರಿಜನರ ರಕ್ತ ಭೂಮಿಗೆ ಬಿದ್ದರೆ ಪುಣ್ಯ ಬರುತ್ತೆ ಎನ್ನುತ್ತಾನೆ. ದೇಶದೇಶಗಳಲ್ಲಿನ ಶೋಷಣೆ ಅದು ಯಾವುದೇ ರೂಪದ್ದಾದರೂ ಶೋಷಣೆಯೇ. ಆದರೆ ಇಲ್ಲಿನ ಹರಿಜನರಿಗಿಂತ ಅಲ್ಲಿನ ಕಪ್ಪುಜನರು ಅನುಭವಿಸುತ್ತಿರುವ ಶೋಷಣೆ, ಅದು ಮೇರೆ ಮೀರಿದ್ದಾಗಿದ್ದು ಅಚಿಬೆಯ ಮಾತಿನಲ್ಲಿಯೂ ಸ್ಪಷ್ಟವಾಗುತ್ತದೆ. ಇದನ್ನು ಗ್ರಹಿಸಿದ ದೇವನೂರರು ಮಾನಸಿಕ ನಲುಗಿ ಹೋದ ಮತ್ತು ಆ ಮೂಲಕ ಆರೋಗ್ಯಕರವಾದಂತಹ ಸಮಾಜ ನಿರ್ಮಾಣವಾಗಬೇಕೆಂಬ ಹಪಹಪಿಕೆ ಅವರಲ್ಲಿದ್ದು, ಲೇಖನ ಗರ್ಭೀಕರಿಸಿಕೊಂಡಿರುವುದನ್ನು ಕಾಣುತ್ತೇವೆ.

೫. **ಯಾರಿಗೆ ಯಾವ ಚಿಕಿತ್ಸೆ:** ಈ ಲೇಖನದಲ್ಲಿ ಚಿಕಿತ್ಸೆ ಯಾರಿಗೆ ಬೇಕಾಗಿದೆ. ಯಾವ ಚಿಕಿತ್ಸೆ ಎಂದಾಗ ಮೊದಲು ಸಮಾಜದ ಸವರ್ಣಿಯರಿಗೆ ಸಾಂಸ್ಕೃತಿಕ ಚಿಕಿತ್ಸೆ ಕೊಟ್ಟು ಅವರಲ್ಲಿನ ಅರಿವನ್ನು ಎಚ್ಚರಿಸಬೇಕು ಎಂದು ಹೇಳಿದ ಲೇಖಕರು ಆನಂತರ ಸಾಮಾಜಿಕತೆಯ ಶೂದ್ರರಿಗೆ ನಾಗರೀಕನ್ನಾಗಿಸಬೇಕಾಗಿದೆ ಎಂದೇಳುತ್ತಾರೆ. ಹಾಗೆಯೇ ಮುಂದುವರೆದು ಹೇಳುತ್ತಾ ದಲಿತ ಸಂಘಟನೆಗಳು ಕೀಳರಿಮೆಯ ಕೀಳು ಹುಚ್ಚುರೋಗದಿಂದ ಬಿಡುಗಡೆಗೊಳಿಸಿ ಕೊಳ್ಳಬೇಕಿದೆ. ಜೊತೆಗೆ ಮೇಲರಿಮೆಯ ಮೇಲು ಹುಚ್ಚುರೋಗದವರನ್ನು ವಿಮೋಚನೆಗೊಳಿಸಬೇಕಾಗಿದೆ ಎಂದು ಹೇಳುವ ಲೇಖಕರು ಸ್ವಾಸ್ಥ್ಯ ಸಮಾಜವನ್ನು ಕಾಣಬಯಸಿರುವುದನ್ನು ಕಾಣುತ್ತೇವೆ.

ಒಟ್ಟಿನಲ್ಲಿ ಸಮಾಜದ ಸ್ವಾಸ್ಥ್ಯಕ್ಕೆ ರೋಗಿಯಾಗಬೇಕು. ಅಥವಾ ವೈದ್ಯರಾಗಬೇಕು. ಎರಡು ನಮ್ಮ ಕೈಯಲ್ಲಿದೆ. ಕುವೆಂಪು ಹೇಳಿಕೆಯಂತೆ "ನಿನಗೆ ನೀನೇ ಶಿಲ್ಪಿ".

೬. **ಬಂಡೆಗಳ ಮೇಲೆ ಚಿಗುರೊಡೆಯಬೇಕಾಗಿದೆ:** ಮನುಷ್ಯ ಮನುಷ್ಯತ್ವದ ನೆಲೆಯಲ್ಲಿ ಬೆಳೆಯಬೇಕು. ಆದರೆ ಇಂದು ಮನುಷ್ಯತ್ವವನ್ನು ಮರೆತು ಮೃಗೀಯ ಗುಣಗಳನ್ನು ಮೈಗೂಡಿಸಿಕೊಳ್ಳುತ್ತಿರುವುದನ್ನು ಕಾಣುತ್ತಿದ್ದೇವೆ. ಸ್ವಾರ್ಥಪರವಾದ ಆಲೋಚನೆಗಳಲ್ಲಿ ತನ್ನನ್ನು

ತಾನೇ ಸುತ್ತಿ ತೆತ್ತುಕೊಂಡು ತನ್ನ ನಾಶಕ್ಕೆ ತಾನೇ ಕಾರಣನಾಗುತ್ತಿದ್ದಾನೆ. ಇಂತಹ ಸ್ಥಿತಿಯಲ್ಲಿ ಮನುಷ್ಯ ತನ್ನೊಳಗನ್ನು ಸ್ವಾಸ್ಥ್ಯ ಚಿಂತನೆಯಲ್ಲಿ ತೊಡಗಿಸಿಕೊಳ್ಳುತ್ತಾ ಉತ್ತಮ ಸಮಾಜದ ಕನಸು ಕಾಣಬೇಕಾಗಿದೆ. ನಮ್ಮ ನಮ್ಮ ನಡುವೆ ಜಾತಿಗೋಡೆಯನ್ನು ಮೀರಿ ಮಾನವೀಯ ಮೌಲ್ಯವನ್ನು ಬಿತ್ತಬೇಕಾಗಿದೆ. ಗ್ರಾಮೀಣ ಪ್ರದೇಶಗಳಲ್ಲಿನ ಜನಸಮುದಾಯ ಅಕ್ಷರ ಜ್ಞಾನದ ಕೊರತೆಯಿಂದ ತುಕ್ಕು ಹಿಡಿದು ಹೋಗಿದ್ದು, ಅವರನ್ನು ಜಾಗೃತರನ್ನಾಗಿ ಮಾಡುವುದು ನಮ್ಮೆಲ್ಲರ ಆದ್ಯ ಕರ್ತವ್ಯವಾಗಿದೆ. ತಮಸೋಮ ಜ್ಯೋತಿರ್ಗಮಯ ಮೃತ್ಯೋರ್ಮ ಅಮೃತಂಗಮಯ ಎನ್ನುವಂತ ಶಿಕ್ಷಣದ ಬೆಳಕಿನ ಕಡೆಗೆ ಅಸ್ಪೃಶ್ಯರನ್ನು ಮೇಲೆತ್ತಬೇಕಾಗಿದೆ. ಹೀಗಾದಾಗ ಸಾಮಾಜಿಕ ತುಳಿತಕ್ಕೊಳಗಾದವರು, ಶೈಕ್ಷಣಿಕವಾಗಿ ದೂರವೇ ಉಳಿದವರು, ಸಾಮಾಜಿಕವಾಗಿ ಗುರುತಿಸಿಕೊಳ್ಳುವುದಕ್ಕೆ ಸಾಧ್ಯವಾಗುತ್ತದೆ. ಆ ಮೂಲಕ ಸಮತಾವಾದ ಒಂದು ರೂಪು ತಾಳುವುದಕ್ಕೆ ಸಾಧ್ಯವಾಗುತ್ತದೆ. ಇದು ಸಾಮಾನ್ಯವಾದ ಕೆಲಸವಲ್ಲ. ಇದಕ್ಕೆ ಎಲ್ಲರೂ ಕೈಜೋಡಿಸಿದಾಗ ಮಾತ್ರ ನಮ್ಮ ಕನಸು ನನಸಾಗಲು ಸಾಧ್ಯ. ಆಗ ಜಡತ್ವಹೊಂದಿದ ಬಂಡೆಯ ಮೇಲೂ ಹೊಸ ಚಿಗುರನ್ನು ಕಾಣುವುದಕ್ಕೆ ಸಾಧ್ಯವಾದೀತು.

**೭. ಕಣ್ಣು ತೆರೆಸುವ ಕೆಲಸ:** ನಮ್ಮಲ್ಲಿನ ಕಟ್ಟುಪಾಡುಗಳು ಆಚರಣೆಗಳು, ಪರಂಪರೆಯಿಂದಲೂ ಅನುಚಾನವಾಗಿ ಸಾಗಿಬಂದಿವೆ. ಇಂದು ಮನುಷ್ಯ ಆಧುನಿಕನಾಗಿದ್ದು, ಆಧುನಿಕತೆಗೆ ತನ್ನನ್ನು ತೆತ್ತುಕೊಳ್ಳಲು ಯತ್ನಿಸುತ್ತಿದ್ದು, ಯತ್ನಿಸುತ್ತಿರುವ ಸಂದರ್ಭದಲ್ಲಿಯೂ ನಮ್ಮ ಹಿಂದಿನ ರೂಢಿಗಳು, ಜಾತಿ, ಮಡಿ-ಮೈಲಿಗೆಗಳು ಯಾವುದೇ ಹೊಸ ರೂಪ ಪಡೆದುಕೊಳ್ಳುವುದಕ್ಕೆ ಸಾಧ್ಯವಿಲ್ಲವಾಗಿ ಜಡ್ಡುಗಟ್ಟಿದ ಸ್ಥಿತಿಯಾಗಿದ್ದೇವೆ. ಹಿಂದಿನಿಂದ ಆಚರಿಸಿಕೊಂಡು ಬಂದಿರುವ ಬೆತ್ತಲೆ ಸೇವೆ, ದೇವದಾಸಿ ಪದ್ಧತಿ, ಹರಕೆ ಒಪ್ಪಿಸುವ, ಎಂಜಲೆಲೆಯ ಮೇಲೆ ಉರುಳು ಸೇವೆ, ದೇವರು-ದಿಂಡರಿಗೆ ಬಲಿಕೊಡುವ ಪದ್ಧತಿ- ಹೀಗೆ ಮುಂತಾಗಿ ಏನೆಲ್ಲವೂ ನಮ್ಮಲ್ಲಿ ಆಚರಣೆಯಲ್ಲಿವೆ. ಇಂತಹ ಈ ಮೌಢ್ಯಗಳಿಂದ ದೂರ ಸರಿದು ವೈಚಾರಿಕ ಪ್ರಜ್ಞೆಯನ್ನು ಬೆಳೆಸಿಕೊಳ್ಳುವುದಕ್ಕೆ ಸಾಧ್ಯ ಮಾಡಿಕೊಡಬೇಕಾಗಿದೆ. ಹೀಗಾದಾಗ ಮಾತ್ರ ಸಾಮಾಜಿವಾಗಿ ಕಣ್ಣು ತೆರೆಯಲು ಅವಕಾಶವಾದಂತಾಗುತ್ತದೆ.

**೮. ಅಸ್ಪೃಶ್ಯತೆ ನಿನ್ನ ಮೂಲ ಎಲ್ಲಿ?:** ಭಾರತದಲ್ಲಿನ ಜಾತಿಗಳು, ನಾವು ಬಿಟ್ಟರೂ ದೂರ ಮಾಡಿದರೂ ಅವು ನಮ್ಮನ್ನು ಬಿಡದಂತೆ ಬೇತಾಳದ ಹಾಗೇ ಕಾಡುತ್ತಿವೆ. ಇವು ದಲಿತರಲ್ಲಿ ಇನ್ನೂ ಮೇರೆ ಮೀರಿದ್ದು, ದಲಿತರಲ್ಲಿನ ಹೊಲೆಯ ಮಾದಿಗರೆಂಬ ಪಂಗಡಗಳಲ್ಲಿ ಪರಸ್ಪರರಿಗೂ ತಾವು ಶ್ರೇಷ್ಠ ಕನಿಷ್ಠರೆಂಬ ತರತಮಭಾವಗಳಿಂದ ಯಾರೂ ಸಹ ಮುಂದುವರೆಯಲು ಸಾಧ್ಯವಾಗದೆ ಹಿಂದುಳಿದಿರುವುದನ್ನು ಕಾಣಬಹುದಾಗಿದೆ. ಇಂತಹ ತರತಮ ಭಾವಗಳನ್ನು ಸೃಷ್ಟಿಸಿದವರು ಮೇಲ್ವರ್ಗದವರಾಗಿದ್ದು, ಇವರಲ್ಲಿನ ಪರಸ್ಪರ ಕಿತ್ತಾಟಗಳೇ ಮೇಲ್ವರ್ಗದವರಿಗೆ ಒಂದು ರೀತಿಯ ಸಂತೋಷಕ್ಕೆ ಕಾರಣವಾಗುತ್ತದೆ. 'ತಂದಾಕಿ ತಮಾಷೆ ನೋಡುವುದೇ' ಇವರ ವೃತ್ತಿ. ಅದರಲ್ಲೇ ಸುಖ ಕಾಣುತ್ತಾರೆ. ಇದನ್ನು ಅರಿತ ಹೊಲೆ-ಮಾದಿಗರು ಪರಸ್ಪರ ಅರಿತು ಬೆರೆತು ಬಾಳಿದರೆ ಅದೇ ಸ್ವರ್ಗ ಸುಖವಾಗುತ್ತದೆ. ಅಸ್ಪೃಶ್ಯತೆಯ ಮೂಲ ಎಲ್ಲಿದೆ ಎಂದರೆ ಅದು ನಮ್ಮಲ್ಲಿಯೇ ಇದೆ. ಇದು ಬದಲಾವಣೆಯಾಗಿ ಬಸವಣ್ಣನವರ ಹೇಳಿಕೆಯಂತೆ "ಇವನಾರವ ಇವನಾರವನೆನ್ನದೆ ಇವ ನಮ್ಮವ

ಇವನಮ್ಮವ"[೧೧] ಎನ್ನುವ ವಿಶಾಲ ಭಾವನೆ ಬೆಳೆಸಿಕೊಳ್ಳಬೇಕಾಗಿದೆ. ಇಲ್ಲದಿದ್ದರೆ ಸಣ್ಣಪುಟ್ಟ ವಿಷಯಗಳಿಗೂ ದಲಿತ ಜಾತಿಗಳಲ್ಲಿ ಕಿತ್ತಾಟ ನಡೆದರೆ ಇದರ ಫಲ ದಕ್ಕುವುದು ಮೇಲು ಜಾತಿಯವರಿಗೇ ಎಂಬುದನ್ನು ಲೇಖಕರು ಮಾರ್ಮಿಕವಾದ ರೀತಿಯಲ್ಲಿ ಹೇಳಿರುವುದನ್ನು ಕಾಣಬಹುದು.

೯. **ಮುಸ್ಲಿಂರೊಡನೆ ಪಿಸು ಮಾತು:** ಸಾಮಾಜಿಕವಾಗಿ ಅಲ್ಪಸಂಖ್ಯಾತರಾಗಿರುವ ಮುಸ್ಲಿಂರೊಂದಿಗೆ ಲೇಖಕರು ಗುಟ್ಟು ಹೇಳುವುದೇನೆಂದರೆ ಹೊಲೆಯ ಮಾದಿಗರಂತೆ ಮುಸ್ಲಿಮರು ದನ ತಿನ್ನುವುದು ಸರ್ವೆ ಸಾಮಾನ್ಯವಾಗಿದೆ. ಮುಸ್ಲಿಮರೂ ದಲಿತರಂತೆ ಶ್ರಮಿಕ ವರ್ಗದವರಾಗಿದ್ದಾರೆ. ಹೀಗಿರುವಾಗ ಮುಸ್ಲಿಮರು ಹೊಲೆಯರನ್ನುದ್ದೇಶಿಸಿ ಲೇ ಹೊಲೆಯ ಎನ್ನುವುದ, ಅದೇ ಹೊಲೆಯರು ಸಹ ಮುಸ್ಲಿಮರನ್ನುದ್ದೇಶಿಸಿ ಏಯ್ ಸಾಬಿ ಎನ್ನುವುದು ಲೇಖಕರಿಗೆ ಎಷ್ಟು ಮಾತ್ರಕ್ಕೂ ಸಮಾಧಾನ ತಂದಿಲ್ಲ. ಬದಲಾಗಿ ಪರಸ್ಪರರಿಬ್ಬರೂ ಅರಿತು ಬದುಕಬೇಕಾದ ಅನಿವಾರ್ಯತೆಯನ್ನು ಒತ್ತಿ ಹೇಳುತ್ತಾರೆ.

೧೦. **ಬೇಡ ಎನಲಿ ಯಾವ ನಾಲಿಗೆಯಲ್ಲಿ:** ಹಿಂದೂ ಧರ್ಮದಲ್ಲಿ ಅನೇಕ ಜಾತಿ ಉಪಜಾತಿಗಳು ಸೃಷ್ಟಿಯಾಗಿವೆ. ಅವುಗಳಲ್ಲಿ ಅತ್ಯಂತ ಕೆಳಜಾತಿ ಎಂದರೆ ದಲಿತ ಅಸ್ಪೃಶ್ಯ ಜಾತಿಯಾಗಿದೆ. ಈ ಜಾತಿಯಲ್ಲಿ ಹುಟ್ಟಿದ ಒಂದೇ ಒಂದು ತಪ್ಪಿಗಾಗಿ ದಲಿತ ಅಸ್ಪೃಶ್ಯರು ಅನೇಕ ರೀತಿಯ ಶೋಷಣೆಯನ್ನು, ಹೊಡೆತ, ಬಡಿತ, ಕೊಲೆಗಳನ್ನು ಯಾವುದೇ ಪ್ರತಿಭಟನೆಯಿಲ್ಲದೆ ಬದುಕಬೇಕಾಗಿದ್ದು, ನೊಂದಂತಹ ದಲಿತ ಅಸ್ಪೃಶ್ಯರು ಹಿಂದೂ ಧರ್ಮವನ್ನೇ ತ್ಯಜಿಸಲು ಸಿದ್ಧರಾದಾಗ ಅವರಿಗೆ ಬೇಡವೆನ್ನುವುದಕ್ಕೆ ಸಾಧ್ಯವಾದರೂ ಹೇಗಾದೀತು. ಹೀಗಾಗಿ ಲೇಖಕರು ಇಲ್ಲಿ ಅಸಹಾಯಕರಾಗಿರುವುದನ್ನು ಕಾಣುತ್ತೇವೆ. ಇತ್ತ ಮತಾಂತರವಾಗಿ ಎಂದು ಹೇಳುವುದಕ್ಕೂ ಆಗದ ಅತ್ತ ಅಸ್ಪೃಶ್ಯರಾಗಿಯೇ ಬದುಕನ್ನು ಕಂಡುಕೊಳ್ಳಿ ಎಂದು ಹೇಳುವುದಕ್ಕೂ ಆಗದ ಒಂದು ರೀತಿಯಲ್ಲಿ ಅಡಕತ್ತರಿಗೆ ಸಿಲುಕಿದ ಸ್ಥಿತಿ ಲೇಖಕರದ್ದಾಗಿರುವುದನ್ನು ಕಾಣಬಹುದು. ಹೀಗಾಗಿಯೇ ಅಲ್ಲವೇ ಅಂದು ಅಂಬೇಡ್ಕರ್ ಹಿಂದೂ ಮತವನ್ನು ತೊರೆದು ಬೌದ್ಧಧರ್ಮವನ್ನು ಸ್ವೀಕರಿಸಿದ್ದು. ಹಿಂದೂ ಧರ್ಮವೆನ್ನುವುದು ಅವರಿಗೆ ಅತ್ಯಂತ ಕ್ರೂರವಾಗಿ ಕಾಣೀಸಿದ್ದನ್ನು ಅವರ ಬದುಕನ್ನು ಗ್ರಹಿಸಿದ ನಮಗೆ ಅರಿವಾಗದೇ ಇರದು.

೧೧. **ಬ್ರಾಹ್ಮಣನ ಒಂದು ಹಲ್ಲಿಗೆ ಗೌಡನ ಎರಡು ಹಲ್ಲು:** ಲೇಖನ ಒಬ್ಬ ಬ್ರಾಹ್ಮಣ ಗುಮಾಸ್ತನ ಹಾಗೂ ಗೌಡ ಅಧಿಕಾರಿಯ ಕಛೇರಿಯಲ್ಲಿನ ನಡವಳಿಕೆಯನ್ನು ಸ್ಪಷ್ಟಪಡಿಸುತ್ತದೆ. ಲೇಖನ ಸ್ಪಷ್ಟಪಡಿಸುವಂತೆ, ಗೌಡ ಅಧಿಕಾರಿ ಬ್ರಾಹ್ಮಣ ಗುಮಾಸ್ತನ ಕಪಾಳಕ್ಕೆ ಹೊಡೆಯುವುದನ್ನು ಕಾಣುತ್ತೇವೆ. ಇದರ ಸೇಡನ್ನು ತೀರಿಸಿಕೊಳ್ಳುವ ನಿಮಿತ್ತ ಬ್ರಾಹ್ಮಣ ಗುಮಾಸ್ತ ಗೌಡ ಅಧಿಕಾರಿಯ ಸೇವಾ ಪುಸ್ತಕದಲ್ಲಿ ಅವನ ಸ್ವ–ವಿವರವನ್ನು ಬರೆಯುತ್ತಾ, ಎರಡು ಹಲ್ಲುಗಳಿಲ್ಲವೆಂದು ನಮೂದಿಸುತ್ತಾನೆ. ಪರಿಣಾಮದಲ್ಲಿ ಗೌಡ ಅಧಿಕಾರಿ ನಿವೃತ್ತನಾದಾಗ ಪೆನ್‌ಷನ್ ಪಡೆಯಲು ಹೋದಾಗ ಸೇವಾಪುಸ್ತಕದಲ್ಲಿ ಎರಡು

[11] ವಚನಗಳು – ಬಸವಣ್ಣ, ಕನ್ನಡ ಸಾಹಿತ್ಯ ಚರಿತ್ರೆ–ಹೆಚ್.ನಂಜೇಗೌಡರು, ಪುಟ–೧೫೭

ಹಲ್ಲುಗಳಿಲ್ಲವೆಂದು ಉಲ್ಲೇಖವಿದೆ. ಹೀಗಾಗಿ ಪೆನ್‌ಷಲ್ ಕೊಡಲು ಬರುವುದಿಲ್ಲವೆಂದು ವಿವರಿಸಲಾಗುತ್ತದೆ. ಪರಿಸ್ಥಿತಿ ಹೀಗಾದಾಗ ಎರಡು ಹಲ್ಲುಗಳನ್ನು ಕೀಳಿಸಿಕೊಂಡು ಪೆನ್‌ಷನ್ ಪಡೆಯಲು ಮುಂದಾಗುವುದನ್ನು ಕಾಣುತ್ತೇವೆ. ಹೀಗಾಗಿ ಲೇಖಕರು ಈ ವಿಚಾರದ ಬಗ್ಗೆ ಬರೆಯುತ್ತಾ ಯಾವತ್ತೂ ಬ್ರಾಹ್ಮಣರನ್ನು ವಿರೋಧಿಸಿಕೊಂಡು, ಅವರ ವೈರತ್ವಕ್ಕೆ ಒಳಗಾಗಬಾರದು. ಆಗಿದ್ದೇ ಆದರೆ ಇಂತಹ ಅನಾಹುತಕ್ಕೆ ದಾರಿ ಮಾಡಿಕೊಟ್ಟಂತಾಗುತ್ತದೆ– ಎಂದು ಎಚ್ಚರಿಕೆಯ ಮಾತುಗಳನ್ನು ನುಡಿಯುತ್ತಾರೆ.

**೧೨. ಆಲನಹಳ್ಳಿಗೆ ಅರ್ಥವಾಗುವುದು ಮತ್ತು ಅರ್ಥವಾಗದಿರುವುದು:**

ಸಾಮಾಜಿಕ ಸಂದರ್ಭದಲ್ಲಿ ತನಗೊಂದು ನ್ಯಾಯ, ಪರರಿಗೊಂದು ನ್ಯಾಯ ಎಂದು ಭಾವಿಸಿಕೊಂಡಿರುವುದನ್ನು ಕಾಣುತ್ತೇವೆ. ಇದು ಎಲ್ಲರ ಬದುಕಿಗೂ ಅನ್ವಯಿಸುತ್ತದೆ. ಲೇಖಕರ ವೈಯಕ್ತಿಕ ಬದುಕಿನಲ್ಲಾದ ವಿಶೇಷವಾಗಿ ನಂಬಿದ, ಅದರಲ್ಲೂ ವಿಶೇಷವಾಗಿ ಶ್ರೀಕೃಷ್ಣ ಆಲನಹಳ್ಳಿಯವರಿಗೆ ಸಂಬಂಧಿಸಿದ ವ್ಯಕ್ತಿ ಚಿತ್ರಣವನ್ನು ಕಟ್ಟಿಕೊಡಲು ಇಲ್ಲಿ ಯತ್ನಿಸಿದ್ದಾರೆ. ಅದೆಂದರೆ ಶ್ರೀಕೃಷ್ಣ ಆಲನಹಳ್ಳಿಯವರು ಮತ್ತು ಲೇಖಕರು ಕೂಡಿಕೊಂಡ ಸಂದರ್ಭದಲ್ಲಿ ಶ್ರೀಕೃಷ್ಣ ಆಲನಹಳ್ಳಿಯವರು ಅವರ ತೋಟದ ಆಳುಗಳನ್ನು ಸಂಭೋದಿಸಿದ ರೀತಿ ಲೇಖಕರಿಗೆ ಕಹಿ ಅನುಭವವನ್ನು ತಂದುಕೊಡುತ್ತದೆ. ಮಾತ್ರವಲ್ಲ ಅದಕ್ಕೆ ತಮ್ಮ ಪ್ರತಿಕ್ರಿಯೆಯನ್ನು ವ್ಯಕ್ತಪಡಿಸುತ್ತಾರೆ. ಆದರೆ ಅದಕ್ಕೆ ಕೊಡುವ ಶ್ರೀ ಕೃಷ್ಣ ಆಲನಹಳ್ಳಿಯವರ ದಲಿತ–ಆಳುಗಳನ್ನು ಕುರಿತ ಪ್ರತಿಕ್ರಿಯೆ (ಲೇ ಬಾರ್ಲ, ಹೋಗ್ಲ, ಏನಮ್ಮಿ) ಗಳು ಅವರ ಪ್ರಕಾರ ಆತ್ಮೀಯ ಭಾವಗಳಂತೆ ಕಾಣುತ್ತವೆ. ಅದೇ ಅಂದಿನ ಸಂದರ್ಭದ ಮಂತ್ರಿ ಅರಸು ಅವರ ಹೆಂಡತಿ ಅದೇ ಏಕವಚನದಲ್ಲಿ (ಯಾರಯ್ಯ, ಏ, ನೀನೇನೊ, ಎತ್ತಪ್ಪಗೌಡ ಅಂತ ಇದ್ನಲ್ಲ, ಅವನ ಮೊಮ್ಮಗನೇ) ಮಾತನಾಡಿಸಿದಾಗ ಅದನ್ನು ಆಲನಹಳ್ಳಿಯವರಿಗೆ ಜೀರ್ಣಿಸಿಕೊಳ್ಳುವುದಕ್ಕೆ ಸಾಧ್ಯವಾಗುವುದಿಲ್ಲ. ಅದನ್ನು ಲೇಖಕರ ಹತ್ತಿರ ಪ್ರಸ್ತಾಪಿಸಿದಾಗ ಅವರು ನಿಮ್ಮನ್ನು ಆತ್ಮೀಯತೆಯಿಂದ ಹಾಗೆ ಸಂಭೋಧಿಸಿದ್ದಿರಬಹುದು ಎನ್ನುವ ತೇಲಿಕೆಯ ಮಾತನ್ನಾಡಿದಾಗ ಆಲನಹಳ್ಳಿಯವರಿಗೆ ಮುಂದೇನೂ ಮಾತನಾಡುವುದಕ್ಕೆ ತೋಚದೆ ಮೌನವಾಗುತ್ತಾರಂತೆ. ಇದು ಲೇಖಕರನ್ನು ಕಾಡಿದ್ದು, ಅದಕ್ಕೆ ತಮ್ಮ ಪರೋಕ್ಷ ಪ್ರತಿಕ್ರಿಯೆಯು ಅವರಿಂದ ವ್ಯಕ್ತವಾಗಿದ್ದು ತಮಗೆ ನೋವಾದಂತೆ ಅನ್ಯರಿಗೂ ನೋವಾಗುತ್ತದೆ ಎಂದು ಅರಿತಾಗ ಮಾತ್ರ ಈ ಎಲ್ಲವನ್ನು ಅಂತ್ಯಗೊಳಿಸಲು ಸಾಧ್ಯವೆನ್ನುವುದು ಲೇಖಕರ ಭಾವ.

**೧೩. ಒಂದು ಒಳನೋಟ:**

ಜಾತಿ ವ್ಯವಸ್ಥೆಯು ಸಾಮಾಜಿಕವಾದ ಅಂತರವನ್ನು ಸೃಷ್ಟಿಸುತ್ತಲೇ ಅದಕ್ಕೆ ಮೀರಿದ ಸಮಸ್ಯೆಯನ್ನು ಹುಟ್ಟುಹಾಕುತ್ತಿರುತ್ತದೆ. ಇದಕ್ಕೆ ಲೇಖಕರು ಒಬ್ಬ ದಲಿತನ ಚಿತ್ರಣಕೊಡುತ್ತಲೇ, ಅವನು ಮಾಡಿದ ತಪ್ಪು, ಅವನು ಸಮುದಾಯಕ್ಕೂ ಮುತ್ತಿಕೊಳ್ಳುವುದನ್ನು ಮಾರ್ಮಿಕವಾಗಿ ವ್ಯಕ್ತಪಡಿಸಿದ್ದಾರೆ. ಜಾತಿ ಸಮಸ್ಯೆ ಎಷ್ಟು ಕ್ರೂರವಾದದ್ದು ಎಂಬುದು ಇಲ್ಲಿ ಸ್ಪಷ್ಟವಾಗುತ್ತದೆ.

೧೪. **ಹುಟ್ಟುತ್ತಾ ವಿಶ್ವ ಮಾನವ:**

ಕುವೆಂಪು ಮನುಷ್ಯ ಹುಟ್ಟುತ್ತಾ ವಿಶ್ವ ಮಾನವನಾಗುತ್ತಾನೆ. ಅಮೇಲೆ ಅವನು ಬೆಳೆದು ದೊಡ್ಡವನಾದ ಮೇಲೆ ಸಮಾಜ ಜಾತಿ, ಧರ್ಮ, ಭಾಷೆ, ಎಲ್ಲವೂ ಸರಪಣಿಯಿಂದ ಬಂಧಿಸಿ ಕುಬ್ಜನಾಗಿ ಅಲ್ಪ ಮಾನವನಾಗಿಸುತ್ತದೆ. ಇದರಿಂದ ಕುವೆಂಪು ಹೇಳುತ್ತಾರೆ. ಎದೆಯ ಗೂಡಲ್ಲಿ ಒಂದು ತೊಟ್ಟಿಲು ಕಟ್ಟಿ ಅದರೊಳಗೊಂದು ಪುಟ್ಟ ಮಗುವನ್ನೊಂದಿಟ್ಟು ತೂಗುತ್ತಿರಬೇಕು. ಇದರಿಂದ ನಾವು ಬೆಳೆದಂತೆಲ್ಲ ನಮ್ಮ ಮಗುತನ ಕಳೆದುಹೋಗುತ್ತದೆ. ಅದರಿಂದ ಕಾವ್ಯವೆಂದರೆ ಬುದ್ಧಿಭಾವಗಳ ವಿದ್ಯುದಾಲಿಂಗನವೆಂದಿದ್ದಾರೆ.

೧೫. **ಹೀಗೆಯೇ ಮುಂದುವರಿದರೆ:**

ಸಮಾಜದಲ್ಲಿನ ಬಡತನ, ವ್ಯವಸ್ಥೆ, ಜಾತಿ, ಪಿಡುಗು ಮುಂತಾದವುಗಳು ಹೀಗೆ ಮುಂದುವರಿಯುತ್ತಾ ಹೋದರೆ ಈ ಅಂತಃಕರಣ ಇಲ್ಲದೇ ಖಾಸಗೀಕರಣ, ಜಾಗತೀಕರಣ, ಉದಾರೀಕರಣ, ನಗರೀಕರಣ, ಯಾಂತ್ರೀಕರಣ ಮುಂದುವರಿದು ಕಾರ್ಪೋರೇಟರ್ ಸೆಕ್ಟರ್‌ರವರೆಗೆ ಸಿಲುಕಿರುವ ಭಾರತದ ಆಡಳಿತದ ವ್ಯವಸ್ಥೆ, ತನ್ನನ್ನೂ ಬಿಡಿಸಿಕೊಡಿ ಎಂಬ ಕೂಗನ್ನು ಕೂಗುತ್ತಿದೆ. ಉದಾ: ಮುಂಬಾಯಿಲ್ಲಿನ ದೊಡ್ಡ ಶ್ರೀಮಂತ ಅಂಬಾನಿಯವರು ಇದ್ದರೆ ಅವರು ಸುತ್ತಮುತ್ತ ಬಡವರೂ ಇದ್ದಾರೆ. ಒಂದು ಹೊತ್ತಿನ ಊಟಕ್ಕೂ ಗತಿಯಿಲ್ಲದವರು ಒಂದೆಡೆ ಇನ್ನೊಂದು ಕಡೆ ತಿಂದು ತೇಗಿ ಬೀಸಾಡುವವರು ಇದ್ದಾರೆ. ಒಟ್ಟಾರೆ ಸಮಾಜದಲ್ಲಿನ ಅಸಮಾನತೆ, ಅಧಿಕಾರ ಒಂದೇ ವರ್ಗಕ್ಕೆ ಸೀಮಿತವಾಗಿರದೆ ಅದು ಎಲ್ಲರಿಗೂ ಸಮನ್ವಯವಾದಾಗ ಮಾತ್ರ ಸಮಾಜದಲ್ಲಿ ಸಮಾನತೆ ಸಾಧ್ಯ ಇಲ್ಲವಾದರೆ ಅಸಮಾನತೆ ಹೆಚ್ಚಾಗಿ ದೊಡ್ಡ ಕ್ರಾಂತಿಯಾಗುತ್ತದೆ.

ಹೀಗೆ ಮುಂದುವರಿದರೆ ಅಂದರೆ ತಮ್ಮಲ್ಲೇ ಒಡುಕಿನ ಸ್ಥಿತಿ ತಂದುಕೊಳ್ಳುವುದು. ಬೇರೆ ಬೇರೆ ಮನಸ್ಥಿತಿಗಳಾಗದೆ ನಾವೆಲ್ಲರೂ ಒಂದೇ ಗುರಿ ನೀತಿ ನಿರ್ದಿಷ್ಟ ನಿಯಮಗಳಿಗೆ ಬದ್ಧರಾಗಬೇಕು. ಆಗದಾಗ ಮಾತ್ರ ಅಭಿವೃದ್ಧಿ ಸಾಧ್ಯ.

೧೬. **ಹುಟ್ಟಿನ ಜಾಡು ಹಿಡಿದು-ಸುಪ್ತ ಮನಸ್ಸಿನ ಅಳಕ್ಕೆ ಇಳಿದಂತೆಲ್ಲ:**

ಸುಪ್ತಮನಸ್ಸಿನ ಆಳಕ್ಕೆ ಇಳಿದಂತೆಲ್ಲ ಕವಿ ಬೇರೊಂದು ವರ್ಗವೇ ಆಗುತ್ತಾನೆ. 'ರವಿ ಕಾಣದನ್ನು ಕವಿ ಕಂಡ' ಎನ್ನುವಂತೆ ಸಮಾಜದಲ್ಲಿನ ಮಡಿ ಮೈಲಿಗೆಯಲ್ಲಿನ ವಿಚಾರದ ಚರ್ಚೆಯಲ್ಲಿ ಒಬ್ಬರು ಇನ್ನೊಬ್ಬರನ್ನು ಮುಟ್ಟಿಸಿಕೊಳ್ಳುವುದಿಲ್ಲ. ಉದಾ: ಮೈಸೂರಿನ ಶಾರದಾ ವಿಲಾಸ ಕಾಲೇಜಿನಲ್ಲಿ ಒಡಲಾಳದ ಸಾಕವ್ವನ ಬಗ್ಗೆ ವಿಚಾರ ಸಂಕಿರಣದಲ್ಲಿ ಒಬ್ಬ ಬ್ರಾಹ್ಮಣ ತಾನೂ ತುಂಬಾ ಸಂಪ್ರದಾಯಸ್ಥ ಯಾರೊಬ್ಬ ಅಸ್ಪೃಶ್ಯರನ್ನು ಮುಟ್ಟಿಸಿಕೊಂಡವನಂತಲ್ಲ, ಆದರೆ ಒಡಲಾಳ ಓದಿದೆ. ಆ ಸಾಕವ್ವ ನನ್ನ ಅಜ್ಜಿ ಅನ್ನಿಸಿಬಿಟ್ಟಳು. ನನ್ನೊಳಗೆ ನೆಲಸಿಬಿಟ್ಟಳು. ಮುಟ್ಟುವುದೆಂದರೆ ಬಹುಶಃ ಇದೆ ಅಲ್ಲವೇ?

ಹುಟ್ಟಿನಿಂದ ಯಾರು ಜಾತಿ ಮಡಿ ಮೈಲಿಗೆಯಾಗುವುದಿಲ್ಲ. ಅದು ಬೆಳೆದಂತೆ ಆಗುವ ಅನುಭವ ಅಷ್ಟೇ. ಸ್ವಭಾವವೇ ಜಾತಿಯನ್ನು ತೋರಿಸುತ್ತದೆ ಹೊರತೂ ಹುಟ್ಟಿನಿಂದ ಯಾವ ಜಾತಿಯನ್ನು ಹೇಳಲು ಸಾಧ್ಯವಿಲ್ಲ. ಹೀಗೆಯೇ ನಮ್ಮೊಳಗಿನ ಅಂತಃಕರಣವನ್ನು ಎಚ್ಚರಿಸುವಂತಹ ಮನುಷ್ಯ ಸಂಬಂಧಗಳನ್ನು ಹುಡುಕುವುದೇ ಲೇಖನದ ಮುಖ್ಯತಾತ್ಪರ್ಯವೆನಿಸಿದೆ.

## ೧೭. ವೈಶಾಖದೊಳಗೆ:

ಒಡಲಾಳ, ಕುಸುಮಬಾಲೆಯಂತೆ ಚದುರಂಗರವರು ವೈಶಾಖ ಕೃತಿಯೊಳಗೆ ಕಲಾವಿದರಿಗೆ ಪ್ರೇರಣೆ ನೀಡುತ್ತದೆ. ವೈಶಾಖದಲ್ಲಿ ಬರುವ ಕೆಲವು ಪ್ರಸಂಗಗಳು ಒಳ್ಳೆಯ ಕಾವ್ಯದ ರೂಪಕದಂತೆ ಅರ್ಥ ಹೊಳೆಯುತ್ತಾ ಸೆಳೆಯುತ್ತಿವೆ. ಉದಾ: ಬಸುರಿಯ ಹೆಣ, ಚಿತ್ರ ಮೂಲನ ಕೋಟೆ, ಪುರುಷರತ್ನ ಸೊಪ್ಪಿನ ಹುಡುಕಾಟ, ಬಿಸಿರೊಟ್ಟಿ ಹೊಟ್ಟೆಗಿಟ್ಟುಕೊಂಡ ತಾಯಿ ಅದ್ಭುತ-ಹಾಗೆಯೇ ಒಡಲಾಳದಲ್ಲಿನ ತಾಯಿ, ಪ್ರಾಮುಖ್ಯತೆ, ಕುಸುಮಬಾಲೆಯ ಚೆನ್ನ ಕೊಲೆಯಾದಂತೆ, ಚದುರಂಗರ ಕಾದಂಬರಿಯ ಗಾಡಿಯ ಹೊಡೆಯುವ ತರುಣನ ಕೊಲೆಗೆ ಊರಿನವರು ಮುಂದಾಗುತ್ತಾರೆ. ಹೀಗೆ ಎರಡೂ ಕೃತಿಯೊಳಗಿನ ಸಮೀಕರಣ ಸಾಮಾಜಿಕ ತಲ್ಲಣಗಳನ್ನು ಒಂದುಗೂಡಿಸುತ್ತದೆ.

## ೧೮. ಲಂಕೇಶ್ ಎಂಬ ತಲ್ಲಣಿಸುವ ಜೀವ:

ಮಹಾದೇವ ಮೂಲತಹ ಗುರುಗಳೆಂದೇ ಲಂಕೇಶರನ್ನು ಸ್ಮರಿಸುವ ಗೌರವಿಸುವ ಲೇಖನವಾಗಿದೆ. ಪತ್ರಕರ್ತರಾಗಿ, ಸಂಕ್ರಾಂತಿ, ಗುಣಮುಖ, ಉಮಾಪತಿ ಸ್ಕಾಲರ್‌ಶೀಪ್, ಯಾತ್ರೆ, ಮುಂತಾದ ಕೃತಿಗಳನ್ನು ರಚಿಸಿದ್ದಾರೆ. ಪತ್ರಿಕೋದ್ಯಮಿಗಳು ಕ್ಷೇತ್ರಗಳು, ರಾಜಶೇಖರ ಕೋಟಿ ಒಂಟಿಕಾಲೀನ ತಪಸ್ವಿಯಾದರೆ ಲಂಕೇಶ್ ಧ್ಯಾನಿಯಂತೆ, ಈ ಇಬ್ಬರೂ ಯಶಸ್ವಿಯಾಗಿ ಆನೇಕ ಪತ್ರಿಕೆಗಳ ಬೆಳವಣಿಗೆ ಕಾರಣವಾಗಿದ್ದಾರೆ.

ಲಂಕೇಶ - ಸಾಹಿತ್ಯದ ಎಲ್ಲೆಗಳನ್ನು ವಿಸ್ತರಿಸುವ ಸೃಷ್ಟಿಕರ್ತರಾಗಿ ಕಾಣಿಸುತ್ತಾರೆ. ಜೊತೆಗೆ ಒಂದು ಎನರ್ಜಿಯಾಗಿ, ತಮ್ಮ ಸಾಹಿತ್ಯದಲ್ಲಿ ವರ್ತಮಾನದ ಬದುಕಿನ ತಲ್ಲಣಗಳಿಗೆ ಪ್ರತಿಕ್ರಿಯಿಸಿದ ವ್ಯಕ್ತಿ ಇವರೊಬ್ಬರೇ. ಇವರೊಡನೆ ಸ್ಪರ್ಧಿಗೆ ಇಳಿಯುವವರು ಗುರುವಾಗಿಯೇ ನೋಡಬೇಕು. ಮಹಾಭಾರತದಲ್ಲಿನ ಅರ್ಜುನ ದ್ರೋಣರೊಂದಿಗೆ ಯುದ್ಧಕ್ಕೆ ನಿಂತಾಗ ಮೊದಲು ಪಾದಕ್ಕೆ ನಮಸ್ಕರಿಸಿ ಆಮೇಲೆ ಯುದ್ಧ ಮಾಡಿದಂತೆ ಸ್ಪರ್ಧಿಸಬೇಕು.

ಲಂಕೇಶರ ಪತ್ರಿಕೋದ್ಯಮದಲ್ಲಿನ ಪ್ರಮುಖ ಕಾಣ್ಕೆಯೆಂದರೆ ಸಮಾಜ ದಲಿತರನ್ನು ಅವಮಾನಿಸಿ ನೋಡುತ್ತಿತ್ತು. ಮುಸ್ಲಿಂರನ್ನು ಅನುಮಾನಿಸಿ ನೋಡುತ್ತಿತ್ತು. ಅದರೆ ಲಂಕೇಶ ಇವೆಲ್ಲವನ್ನು ಆರೋಗ್ಯಕರವಾಗಿ ನೋಡುವ ಒಂದು ನೋಟ ಕೊಟ್ಟರು.

ತಲ್ಲಣಕ್ಕೆ ಬಂದರೆ ಲಂಕೇಶ್ ತಲ್ಲಣಿಸುವ ಜೀವ. ಅವರು ತೀರಿಕೊಂಡ ಮೇಲೆ ನಾಡಿನ ತಲ್ಲಣ ಯದ್ವಾತದ್ವಾ ಹೆಚ್ಚಾಗಿ ಬಿಟ್ಟಿವೆ. ಯಾರು ಏನೂ ಮಾಡಿದರು ಯೋಚನೆ ಮಾಡಿ ಮಾಡುವ ಭಯ ಉಂಟು ಮಾಡುತ್ತಿದ್ದರು. ಇದರಿಂದ ಒಳ್ಳೆಯದು ಕೆಟ್ಟದ್ದು ಎರಡು ಆಗಿದೆ. ಆದ್ದರಿಂದ ಪ್ರೋ.ರಾಮದಾಸ್ ಲಂಕೇಶರನ್ನು ಹುಚ್ಚು ಫಿರಂಗಿ ಎನ್ನುತ್ತಿದ್ದೂ ಯಾವಾಗ ಎಲ್ಲಿ ಢಮಾರು ಅನ್ನುತ್ತದೆ ಅನ್ನುವುದೇ ಗೊತ್ತಿಲ್ಲ ಎನ್ನುತ್ತಿದ್ದರು.

ಲಂಕೇಶ್ ನಮ್ಮೊಂದಿಗಿದ್ದಿದ್ದರೆ, ಮತಾಂತರ ನಿಷೇಧ, ಹಂಪಿಯಲ್ಲಿನ ಭೂತಕಾಲದ ಸಶ್ಮಾನ ನಿರ್ಮಾಣದ ಕಾರ್ಯ, ಗೋಹತ್ಯೆ ನಿಷೇಧದಂತಹ, ಕಾನೂನು ತರುವ ಸರ್ಕಾರದ ಬಯಕೆಗಳಾದರೂ ಸ್ವಲ್ಪ ಬದಲಾಗುತ್ತಿತೇನು ಜೊತೆಗೆ ಮಠಾಧಿಪತಿಗಳು, ರಾಜಕಾರಣಿಗಳು ಭಯ ಪಡುತ್ತಿದ್ದರು.

ಗೋಹತ್ಯೆ ನಿಷೇಧಕ್ಕೆ ಲಂಕೇಶರು ಈ ರೀತಿಯಾಗಿ ಪ್ರತಿಕ್ರಿಯಿಸುತ್ತಿದ್ದರೇನೋ ಪರಂಪರೆಯಿಂದ ಯಜ್ಞ ಯಾಗಗಳಲ್ಲಿ ಗೋಮಾಂಸವನ್ನು ಅರ್ಪಿಸುತ್ತಿದ್ದರು. ಜೊತೆಗೆ ಗೋಮಾಂಸಕ್ಕೆ 'ವಾಜಪೇಯಿ ಖಾದ್ಯ' ಎಂದು ಹೆಸರಿಟ್ಟು, ರಾಜ್ಯದ ತುಂಬಾ ಜನರಿಗೆ ಪರಿಚಯಿಸುತ್ತಿದ್ದರು. ೮೦ರ ದಶಕದಲ್ಲಿನ ಮೀಸಲಾತಿ ಸೆಮಿನಾರ್‌ನಲ್ಲಿ ಲಂಕೇಶರು ದಲಿತರು ಈ ಸಮಾಜದ ಕಡೆಗೆ ನೋಡುತ್ತಿರುವುದು. ಪ್ರೀತಿ ಮತ್ತು ಮುಗುಳ್ನಗೆಗಾಗಿ ಎಂದಿದ್ದರೂ ಹೀಗಿಯೇ ಲಂಕೇಶರು ಒಂದು ಮುಗುಳ್ನಗೆಯಾಗಿಯೂ ನಮ್ಮೊಡನೆ ಇದ್ದಾರೆ.

**೧೯. ಮಾಜಿ ಉಸ್ತಾದರೊಬ್ಬರ ಹಾಲಿ ಜೀವನ:**

ಬನ್ನಿಕುಪ್ಪೆ ಗ್ರಾಮದಲ್ಲಿರುವ ಕುಸ್ತಿಪಟು ನಿಂಗಯ್ಯ ಹೆಂಡ್ತಿ ಮಾದಮ್ಮ ೪೫ ವಯಸ್ಸು. ಇಬ್ಬರು ಮಕ್ಕಳು ಬಾಡಿಗೆಯ ಮನೆಯಲ್ಲಿ ವಾಸ ಆದರೆ ಮೂಲ ಮೈಸೂರಿನ ಅಶೋಕಪುರಂನವರು. ಕುಸ್ತಿಗೂ ಅವರಿಗೂ ಸಂಬಂಧವಿರಲಿಲ್ಲ. ಮೈಸೂರಿನಲ್ಲಿ ಜೀವನ ಸಾಗಿಸಲು ಆಗದಿದ್ದಾಗ ಬನ್ನಿಕುಪ್ಪೆಯಲ್ಲಿ ಕುಸ್ತಿ ಕಲಿಸಿ ಬದುಕುವ ಎನ್ನುವ ಆಶೆಯಿಂದ ನೆಲೆಸಿದ್ದಾರೆ. ಆದರೆ ವಯಸ್ಸಾದ ಮೇಲೆ ಈಗ ಮಾದಮ್ಮನು ಕೂಲಿ ಆಶ್ರಯಿಸಿ ಬದುಕ ಬೇಕಾದ ಪರಿಸ್ಥಿತಿ ಬಂದಿತ್ತು. ಕೂಲಿ ಸಿಕ್ಕರೆ ಊಟ ಇಲ್ಲದಿದ್ದರೆ ಇಲ್ಲ. ಆದರೂ ಇಲ್ಲಿ ಬಡತನದ ಬೇಗೆಯು ಅವರ ಇಡೀ ಮನೆಯನ್ನು ಇಣುಕಿ ನೋಡಿದರೆ ಒಟ್ಟಾಗಿ ಅರ್ಥವಾಗುತ್ತಿತ್ತು. ಜೊತೆಗೆ ಕೃಶವಾದ ಬಡದೇಹಗಳು ಮಕ್ಕಳ ಹರಿದ ಚಡ್ಡಿ ತೇಪ ಹಾಕಿದ ಅಂಗಿಗಳು ಇಡೀ ಮನೆಗೆ ಸೊಬಗು ತರುತ್ತಿದ್ದವು. ಅದಲ್ಲದೆ ಇವರಿಗೆ ಜೀತ ವಿಮೋಚನೆಯ ಹಣ ೫೦೦ ರೂ. ರಲ್ಲೇ ಬದುಕುತ್ತಿದ್ದರೂ ಸರ್ಕಾರದ ಒಂದು ಜನತಾ ಮನೆ ಕಟ್ಟಿಸಿಕೊಟ್ಟಿದೆ. ಅದಕ್ಕೆ ಗಿಲಾವ್ ಆಗದೆ ತೊಂದರೆ ಅನುಭವಿಸುತ್ತಿದ್ದಾರೆ. ಇಡೀ ಮನೆಯ ಬದುಕು ಭಾರತದ ಬಡತನದ ಪ್ರತೀಕವಾಗಿತ್ತು.

### ೨೦. ಒಂದು ಹೆಬ್ಬೆಟ್ಟು ಕಥೆ:

ಹುಣಸೂರು ತಾಲ್ಲೂಕು, ಬನ್ನಿಕುಪ್ಪೆ ಗ್ರಾಮದ ದಲಿತ ವರ್ಗಕ್ಕೆ ಸೇರಿದ ಯಜ್ಜೂರಯ್ಯ ಎಂಬುವರು ೪೦ ವರ್ಷಗಳ ಹಿಂದೆ ದತ್ತುವಾಗಿ ಬಂದು ನೆಲೆಸಿದರು. ನಂತರ ಮದುವೆಯಾಗಿ ಹೆಂಡ್ತಿ ತೀರಿ ಹೋದ ಮೇಲೆ ಮಾವನರ ಮನೆಯವರು ಆಸ್ತಿಪಾಸ್ತಿ ಕಿತ್ತುಕೊಂಡು ಹೊರಗೆ ಕಳುಹಿಸಿದರು. ಕೊನೆಗೆ ಸರ್ಕಾರದಿಂದ ೩ ಎಕರೆ ಗದ್ದೆ ದೊರತು ಅದರಲ್ಲೇ ಜೀವನ ಸಾಗಿಸುತ್ತಿದ್ದರು. ಇವರಿಗೆ ಇಬ್ಬರು ಗಂಡು ಮಕ್ಕಳು, ಒಬ್ಬನಿಗೆ ೨೫ ವರ್ಷ ಸ್ವಾಮಿ ಅಂತ ಇನ್ನೊಬ್ಬನಿಗೆ ೨೦ ವರ್ಷ ಪಾಪಯ್ಯನು ಈ ಮಗನನ್ನು ೪೦೦ ರೂ., ಜೀತಕ್ಕೆ ಸೇರಿಸಿ ೨೫೦ರೂ.ನಲ್ಲಿ ಮದುವೆ ಮಾಡಿಸುವುದು. ಉಳಿದ ೧೫೦ ರೂನಲ್ಲಿ ಮನೆ ಗೀಲಾವ್ ಮಾಡಿಸಬೇಕೆಂಬ ಕನಸ್ಸು ಕಟ್ಟಿಕೊಂಡು ಕೊನೆಗೆ ೧೫ ವರ್ಷಗಳು ಯಾವುದೇ ತೊಂದರೆಯಾಗದೆ ಭೂಮಿ ಫಲವತ್ತಾದ ಫಸಲು ನೀಡುತ್ತಿತ್ತು. ಆದರೆ ಅವರ ಕೋಮಿನ ಸಿದ್ದಯ್ಯನ ಮಗ ಸಿದ್ದಯ್ಯ ಎಂಬಾತ ಯಜ್ಜೂರಯ್ಯನ ಮಾಡುವ ಭೂಮಿ ತನಗೆ ಸೇರಬೇಕೆಂದು ಹುಣಸೂರು ಕೋರ್ಟಲ್ಲಿ ದಾವೆ ಹೂಡಿದ ಅಲ್ಲಿಂದ ಬಡತನ ಸಂಕಷ್ಟಗಳು ಶುರುವಾಯಿತು. ಇದ್ದ ನಾಲ್ಕು ನೂರುಗಳಿಗೂ ಕೇಸಿಗೆ ಅರ್ಜಿ ಹಾಕಿ ವಕೀಲರ ಫೀಸು ಮುಂತಾದ ವಿಷಯಗಳಿಂದ ಹಣಕ್ಕಾಗಿ ಯಜ್ಜೂರಯ್ಯ ದೊಡ್ಡೇಗೌಡನ ಮಗ ಚೆನ್ನೇಗೌಡನ ಮನೇಲಿ ಜೀತಕ್ಕಿರುವುದೆಂದೂ ಭಾವಿಸಿದ ಕೊನೆಗೆ ಒಂದು ದಿನ ಹುಣಸೂರಿನ ಲಾಯರು ಗೋಪಾಲಕೃಷ್ಣ ನಿನ್ನ ಕೇಸು ಹುಣಸೂರಿನಿಂದ ಮೈಸೂರಿಗೆ ವರ್ಗಾವಣೆಯಾಗಿದೆ. ಆದರಿಂದ ನೀನು ಚನ್ನೇಗೌಡರ ಹೆಸರಿಗೆ ಭೂಮಿ ಕ್ರಯಮಾಡು ಎಂದು ಹೇಳಿ ಒಂದು ಖಾಲಿ ಪತ್ರಕ್ಕೆ ಹೆಬ್ಬೆಟ್ಟು ಹೊತ್ತಿಸಿ ಆರು ಸಾವಿರ ರೂ.ಗೆ ಕ್ರಯ ಮಾಡಿಸಿ ಕೊನೆಗೆ ಭೂಮಿಯನ್ನು ಲಪಾಟಿಸಿದ್ದರು. ಇದು ತಡವಾಗಿ ಗೊತ್ತಾಯಿತು. ಕೇಸು ಹುಣಸೂರಲ್ಲಿ ಯಜ್ಜೂರಯ್ಯನವರ ಪರವಾಗಿತ್ತು. ಆದರೆ ಊರಿನ ಗೌಡ ಇವನಿಗೆ ಮೋಸ ಮಾಡಿದ ಇದು ಒಂದು ರೀತಿಯಲ್ಲಿ ದಲಿತರನ್ನು ಶೋಷಣೆ ಮಾಡುವ ಮೇಲ್ವರ್ಗದವರ ದೌರ್ಜನ್ಯವೆಂದೂ ಹೇಳಬಹುದು. ಏಕೆಂದರೆ ಮಾರಿಕೊಂಡವರು ಕತೆಯಲ್ಲಿ ಬರುವ ಕಿಟ್ಟಪ್ಪ ಲಕ್ಷ್ಮೀಯನ್ನೇ ದೇಹವನ್ನೇ ತನ್ನದಾಗಿಸಿಕೊಳ್ಳುವಂತೆ ಮೇಲ್ವರ್ಗದವರು ಒಂದು ರೀತಿಯಲ್ಲಿ ಯಜ್ಜೂರಯ್ಯನ ಭೂಮಿ ನುಂಗಿ ನೀರು ಕುಡಿದರು. ಒಂದು ರೀತಿಯಲ್ಲಿ ದಲಿತರ ಅನಕ್ಷರತೆಯನ್ನು ಬಂಡವಾಳ ಮಾಡಿಕೊಂಡು ಬೇಕಾದಷ್ಟು ಜಮೀನನ್ನು ಲಪಾಟಿಸಿದರು. ವಾಸ್ತವವಾಗಿ ಎಲ್ಲ ಹಳ್ಳಿಗಳಲ್ಲೂ ಇಂತಹ ಅನ್ಯಾಯಕ್ಕೊಳಗಾದ ದಲಿತರ ಬದುಕನ್ನು ಎಳೆ ಎಳೆಯಾಗಿ ಲೇಖನದಲ್ಲಿ ವಿವರಿಸಿದ್ದಾರೆ.

### ೨೧. ಕುರುಡು ಜಾತಿಯು ಕುಣಿಯೂತಲಿತ್ತೋ:

ಎಲ್ಲಿ ಘಟನೆಗಳಲ್ಲಿ ಜಾತಿಯ ಸ್ವಾರ್ಥವನ್ನು ಗುರುತಿಸುವುದಾಗಿದೆ. ಇದಲ್ಲದೆ ಒಡಲಾಳದ ಪಿ.ಸಿ.ರೇವಣ್ಣನ್ನೂ ಕಾಳಣ್ಣ ಕಡಲೆಕಾಯಿ ಕಳವು ಮಾಡಿದ್ದಾನೆಂದು ಇಡೀ ಮನೆಯನ್ನು ಜಪ್ತಿ ಮಾಡಿ ಅನ್ಯಾಯವಾಗಿ ಕಾಳಣ್ಣನಿಗೆ ಎಕ್ಕತ್ತಿಗೆ ಹೊಡೆಯುವುದು ಹಾಗೂ ಮನೆಯನೆಲ್ಲ ಹುಡುಕಾಡುವುದು. ಅದರಂತೆಯೇ ಲೇಖಕರು ಈ ಶೀರ್ಷಿಕೆಯಲ್ಲಿ ಜಾತಿಯ ಕುರುಡು ಪ್ರೀತಿಯಿಂದಲೇ ತಪ್ಪು ಎಸಗಿದ್ದಾರೆ. ನ್ಯಾಯ ಅನ್ಯಾಯಗಳ ಪರಿಶೀಲನೆ ಮಾಡದೆ

ಸದಾ ದಲಿತರ ಮೇಲೆ ಗೂಬೆ ಕೂರಿಸುವುದಾಗಿದೆ. ಹೊಳೆ ನರಸೀಪುರದಲ್ಲಿ ಗಂಗೂರಿನ ಗಲಾಟೆ ಸೈಕಲ್ ಸ್ಟ್ಯಾಂಡ್ ತೆಗೆಯುವಾಗ ಹರಿಜನ ಹುಡುಗನ ಬೂಡ್ಸ್ ನಮ್ಮವ್ವನಿಗೆ ತಗುಲಿತೆಂದು ಹೊಡೆದಾಟವಾಯಿತು.

**೨೨. ಮಾನವೀಯತೆ ಅಂತಾರಲ್ಲ – ಅದರ ಬಗ್ಗೆ:**

೧೯೭೩ರಲ್ಲಿ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಮಾಡಿದ ಭಾಷಣದ ಲೇಖನವಾಗಿದೆ.

ದೇವನೂರು ಮಹಾದೇವರವರು 'ಮಾನವತೆ' ಎಂಬುದರ ಪರಿಕಲ್ಪನೆಯನ್ನು ವಿವರಿಸುತ್ತಾ ಇಂದಿನ ಓದಿನಿಂದ ಮಾತ್ರ ನಿಜವಾದ ಕತ್ತಲು, ಬೆಳಕುಗಳ ಪರಿಚಯವಾಯಿತು. ಅದೇ ಓದಿಲ್ಲ ಎಂದರೆ, ಯಜ್ಞೂರಯ್ಯನ ಹಾಗೆ ಬೇರೆಯವರ ಮನೆ ಜೀತ ಮಾಡಿಕೊಂಡು ಗುಲಾಮನಾಗಿ ಜೀವಿಸಬೇಕಾಗಿತ್ತು. ಆದರೆ ನನ್ನ ಎದೆಗೆ ಅಕ್ಷರ ಬಿದ್ದಿದೆ. ತಿಳಿದವರ ಒಡನಾಟದಿಂದ ಒಂದಿಷ್ಟು ತಿಳಿದಿದೆ. ಈ ದೇಶದಲ್ಲಿ ಸ್ವಾತಂತ್ರ್ಯ ಮತ್ತು ವ್ಯಕ್ತಿ ಸ್ವಾತಂತ್ರ್ಯ ಎಂದರೆ ಜಾತಿ, ಉನ್ನತ ಜಾತಿ ಹಾಗೂ ಆಸ್ತಿ, ಶ್ರೀಮಂತಿಕೆ ಉಳ್ಳವರ ಸ್ವಾತಂತ್ರ್ಯದಿಂದಾಗಿ, ಸಮಾಜದಲ್ಲಿ ಅಸಮತೆಯ ಭೀಕರತೆ; ಭಾರತದ ಸನಾತನ ಧರ್ಮದ ಸುಲಿಗೆಗಿಂತ ಹೆಚ್ಚು ಕ್ರೂರವಾಗಿದೆ.

ಜಾತಿ ಹಾಗೂ ವರ್ಣ ವ್ಯವಸ್ಥೆಯಲ್ಲಿ ಇಲ್ಲಿ ಹುಟ್ಟುವ ಮಕ್ಕಳ ಸಾಮಾಜಿಕ ಚಲನೆಯು ಕಾಲು ಕತ್ತರಿಸಿ ಚಲನೆಯೇ ಇಲ್ಲದಂತೆ ಮಾಡಿದೆ. ಚಾತುರ್ವರ್ಣ ವ್ಯವಸ್ಥೆಯಲ್ಲಿ ಮಗು ಹುಟ್ಟುತ್ತಲೇ ಮಿದುಳಲ್ಲಿ ಅಸಮಾನತೆಯ ಮೇಲುಕೀಳುತನಗಳ ಮಾನವತೆಯನ್ನು ಕೊಂದು ಹುಟ್ಟಿಸುವಂಥ ಯಶಸ್ವಿ ಶಸ್ತ್ರ ಚಿಕಿತ್ಸೆ ಇದೇ, ದೇಶದಲ್ಲಿ ಮುಕ್ಕಾಲು ಪಾಲು ಬಡತನದಲ್ಲಿರುವ ನೊಂದವರು ದಲಿತರು ಅಲ್ಪಸಂಖ್ಯಾತರು, ಹಿಂದುಳಿದವರೇ ಇದ್ದೇವೆ. ಆದರೂ ಈ ದೇಶದ ಮಾಲೀಕತ್ವ ನಮಗೆ ಸಿಕ್ಕಿಲ್ಲ. ಹಿತಕ್ಕೆ ತಕ್ಕಂತೆ ಪರಿವರ್ತನೆ ಮತ್ತು ಬದಲಾವಣೆಯಾಗಬೇಕಿತ್ತು. ಪ್ರಜಾಪ್ರಭುತ್ವ ಎಂದರೆ ಇದೇ ಅಲ್ಲವೇ?

ಉತ್ತಮವಾದ ಸಾಹಿತ್ಯದಲ್ಲಿ ಸಮಾನತೆಯನ್ನು ಹುಡುಕುವುದು ಎಂದರೆ ಜಾತಿಯ ರಣರಂಗದ ಹೆಣಗಳ ರಾಶಿ ಅಲ್ಲಿ ಇಲ್ಲಿ ಉಳಿದಿರಬಹುದಾದ ಜೀವ ಹುಡುಕುವ ಕೆಲಸದಂತಾಗುತ್ತದೆ. ಇವತ್ತಿನ ಸಾಹಿತ್ಯ ವಲಯವೂ ಜಾತಿಯ ಪೆಡಂಭೂತದಿಂದ ಸಾಕಷ್ಟು ನಲುಗಿದೆ.

ಇನ್ನು ೨೦ನೇ ಶತಮಾನಕ್ಕೆ ಬಂದರೆ ಕುವೆಂಪು ಹೆಚ್ಚು ಮಾನವೀಯರಾದ ಕವಿ ಹಾಗೂ ಶಿವರಾಮಕಾರಂತರು, ಕುವೆಂಪುರವರು ಕಾದಂಬರಿ ಮಲೆಗಳಲ್ಲಿ ಮದುಮಗಳು ಸರ್ವರಿಗೂ ಸಮಪಾಲು ಸರ್ವರಿಗೂ ಸಮಬಾಳು ಎಂದರೆ ಕಾರಂತರ ಜೋಮನ ದುಡಿಯಲ್ಲಿ ಸಮಾನತೆಯ ವ್ಯವಸ್ಥೆ ವಿರುದ್ಧ ಚೋಮ ದುಡಿ ಬಾರಿಸುತ್ತಲೇ ಸ್ವರ್ಗಸ್ಥನಾಗುವುದು. ನವ್ಯ ಕಾಲಕ್ಕೆ ಬಂದರೆ ವ್ಯಕ್ತಿಯನ್ನೇ ಜಗತ್ತು ಎಂದು ತೋರಿಸಿತು.

ದಲಿತರ ಬಗ್ಗೆ ಮಾತಾಡುತ್ತ ಪ್ರತಿಯೊಬ್ಬನೂ ತನ್ನನ್ನೂ ತಾನೇ ಉದ್ಧಾರ ಮಾಡಿಕೊಳ್ಳುವ ಸ್ಪರ್ಧೆ. ಈ ದೇಶದಲ್ಲಿ ಉಂಟಾಗಬೇಕು. ದಲಿತರಿಗೆ ದೊಡ್ಡ ದೊಡ್ಡ ಉದ್ಯೋಗ ಕೊಟ್ಟ ಮಾತ್ರಕ್ಕೆ ಅವರ ಉದ್ಧಾರವಾಗುತ್ತದೆಯೇ! ಅದು ಸಾಧ್ಯವಿಲ್ಲ, ಅದರ ಬದಲಿಗೆ ಮನುಷ್ಯತ್ವ, ಪ್ರೀತಿ ಇತರರೊಡನೆ ಸಾಮರಸ್ಯ, ಸಮಾನತೆ, ಸಹೋದರತ್ವ ನೀಡಬೇಕು ಇಲ್ಲದಿದ್ದರೆ ಶೋಷಣೆಯಲ್ಲಿರುತ್ತೇವೆ.

ಶೋಷಣೆ ಎನ್ನುವುದು ಎರಡು ರೀತಿಯಿದೆ. ೧. ಕಾಣೋದು ಇನ್ನೊಂದು ಕಾಣದೆ ಇರೋದು ಪ್ರತ್ಯಕ್ಷ ತೆರಿಗೆ – ಪರೋಕ್ಷ ತೆರಿಗೆ ಆದರೂ ಬುದ್ಧಿ – ಹೃದಯದಂತೆ – ದೂರನೇ ಇರುತ್ತದೆ. ಆದರೂ ಪ್ರೀತಿಗಾಗಿ ಸಮಾನತೆಗಾಗಿ ಮಾನವತೆಯ ಸ್ಪರ್ಶಕ್ಕಾಗಿ ಸದಾ ತುಡಿಯುತ್ತಿರುತ್ತದೆ. ಆದರಿಂದ ಪಂಪ "ಮಾನವ ಧರ್ಮ ತಾನೊಂದೇ ವಲಂ" ಎಂದಿದ್ದಾರೆ.

**೨೩. ಪ್ರತಿಭಾನೇಷಣೆಯೇಗಾಗಿಯೇ ಮೀಸಲಾತಿ:**

ಸುಮಾರು ೧೩೫ ವರ್ಷಗಳ ಹಿಂದೆ ಮೈಸೂರಿಗೆ ವಿಶೇಷ ಮೀಸಲಾತಿ ಇತ್ತು. ಇದರಿಂದ ಪ್ರತಿಭೆಗೆ ಬೆಲೆ ಇಲ್ಲ. ನಾವು ಮಾಡಬೇಕಾದ್ದು ಏನೆಂದರೆ ಸಮಾನ ರೂಪ ಶಿಕ್ಷಣ ವ್ಯವಸ್ಥೆ ಸರಿಪಡಿಸಿದ್ದಾರೆ. ಅರ್ಧ ದೇಶ ಹಸನಾಗುತ್ತದೆ ಇಲ್ಲವಾದರೆ ಶೈಕ್ಷಣಿಕ ಕ್ಷೇತ್ರ ವ್ಯಾಪಾರೀಕರಣಗೊಂಡು ಮೌಲ್ಯಗಳು, ಪ್ರತಿಭೆಗಳು ಸಾಯುತ್ತೇವೆ. ಮೀಸಲಾತಿ ಮೂಲತಹ ಪರಂಪರೆಯಿಂದ ವಂಚಿತರಾದವರಿಗೆ ವಿಶೇಷವಾದ ಮಾರ್ಗಗಳಿಂದ ಕೊಡುವುದಾಗಿದೆ.

ಆದರೆ ಇದು ಇನ್ನೂ ಭಾರತಕ್ಕೆ ಬಂದಿಲ್ಲ. ದಲಿತರನ್ನೂ ಹಿಂದುಳಿದವರನ್ನು ಹಳ್ಳಿಗರನ್ನು, ಕಾರ್ಮಿಕರನ್ನು ವಂಚಿಸುವ ಬುದ್ಧಿಯೇ ಭಾರತದಲ್ಲಿ ಪ್ರತಿಭೆ ಅನ್ನಿಸಿಕೊಂಡು ಬಿಟ್ಟಿದೆ. ಈಗ ಸಿಇಟಿ ಪರೀಕ್ಷೆಗಳಲ್ಲಿ ಪಡೆದ ಅಂಕಗಳನ್ನು ಮಾತ್ರ ಪರಿಗಣಿಸುವುದು ಹಳ್ಳಿ ಮಕ್ಕಳ ಕತ್ತು ಹಿಸುಕುವ ಕ್ರೌರ್ಯವೆನಿಸಿಕೊಂಡಿದೆ. ಕುತಂತ್ರ ಬುದ್ಧಿಯೇ ಇಲ್ಲಿ ಪ್ರತಿಭೆಯಾಗಿದೆ. ಭಾರತದಲ್ಲಿ ಜಾತಿಗನುಣವಾಗಿ ಮೀಸಲಾತಿ ವರ್ಗೀಕರಣಕ್ಕೆ ಎಲ್ಲ ಕಡೆ ತಳಜಾತಿಗಳು ಹೋರಾಟ ನಡೆಸುತ್ತಿವೆ.

ಬುದ್ಧಿ ಮತ್ತು ಪ್ರತಿಭೆ ಪ್ರತಿಭಾನ್ವೇಷಣೆಗಾಗಿಯೇ ಮೀಸಲಾತಿ ಬೇಕು. ಎಲ್ಲ ಜಾತಿ ಜನಾಂಗಗಳಿಗೂ ಅವಕಾಶ ಇದ್ದಾರೆ. ಅದು ಸಮುದ್ರದಲ್ಲಿ ಮೀನು ಹಿಡಿದಂತೆ ಎಂಬುದು ಯು.ಆರ್. ಅನಂತಮೂರ್ತಿಯವರ ರೂಪಕ ಸಾದೃಶ್ಯ.

೭೦ರ ದಶಕದಲ್ಲಿ ದಲಿತರು ಎಚ್ಚೆತ್ತು ಧ್ವನಿಗೂಡಿಸಿ ತಮಟೆ ಬಡಿಯುವುದನ್ನು ನಿರಾಕರಿಸುವಂತೆ ಕರೆ ಕೊಟ್ಟರು ಇದರಿಂದ ದಲಿತರು ಬಹಿಷ್ಕಾರ ಹಲ್ಲೆಗಳಿಗೆ ತುತ್ತಾಗಬೇಕಾಯಿತು. ಇದಾದ ಮೂವತ್ತು ವರ್ಷಗಳ ನಂತರ ತಮಟೆ ಬಡಿಯುವ ಅವಮಾನ ಸುಲಿಗೆಗಳಿಂದ ಬಿಡುಗಡೆಯಾಯಿತು. ಇಂದು ತಮಟೆ ಒಂದು ಜನಾಂಗದ ವೃತ್ತಿಯೊಂದಿಗೆ–ಸಾಂಸ್ಕೃತಿಕ ಕಲೆಯ ಅಭಿವ್ಯಕ್ತಿಯೆನಿಸಿದೆ.

**೨೪. ಖಾಸಗೀ ಸಂಚಿನ ವಲಯ:**

ನಮ್ಮ ಸಮಾಜದಲ್ಲಿ ಖಾಸಗೀವಲಯದಲ್ಲಿ ಮೀಸಲಾತಿಯ ಹಂಬಲ. ಅಮೇರಿಕಾವು ಖಾಸಗೀಕರಣದಲ್ಲಿ ಯಶಸ್ವಿಯಾದ ದೇಶ. ಅಲ್ಲೇ ವಂಚಿತರಿಗೆ ಜನಾಂಗೀಯ ಭಿನ್ನತೆಯಲ್ಲಿ ಇರುವವರಿಗೆ ಮೀಸಲಾತಿ ನೀಡುವುದಾದರೆ ಭಾರತದಲ್ಲಿ ಏಕೆ ಇಂತಹ ದುಸ್ಥಿತಿ ಒದಗಿದೆ?

ಭಾರತದಲ್ಲಿ ಮೀಸಲಾತಿ ಕಾನೂನು ಇದ್ದರೂ ಅದರೊಳಗೇನೆ ದಲಿತರನ್ನು ವಂಚಿಸುವುದು. ಹೀಗೆ ದಲಿತರಿಗೆ ಮೀಸಲಾಗಿದ್ದ ಅನುದಾನವನ್ನು ಸರಿಯಾಗಿ ಬಳಸದೆ ಇರುವುದು. ದಲಿತರಿಗೆ ಸಿಗುವ ಸ್ಥಾನಮಾನಗಳನ್ನು ವಂಚಿಸುವುದು. ಇತ್ತೀಚಿನ ವರದಿಗಳಲ್ಲಿ ಕಂಡು ಬರುತ್ತದೆ. ಇದು ದಲಿತರನ್ನು ತುಳಿಯುವ ಹುನ್ನಾರು ಸರ್ಕಾರಗಳೇ ಮುಂದೊಂದು ಕಾಲಕ್ಕೆ ಖಾಸಗೀ ಆಡಳಿತದಲ್ಲಿ ನಡೆಯಬಹುದು. ಆವಾಗ ಎಲ್ಲವೂ ಖಾಸಗಿ ನೆಲೆಯಲ್ಲಿರುತ್ತದೆ. ಒಟ್ಟಾರೆ ಇಡೀ ದೇಶದ ಆಡಳಿತ ಬಂಡವಾಳ ಶಾಹಿಗಳ ಕೈಗೊಂಬೆಯಾಗಿ ಎಲ್ಲವೂ ಖಾಸಗೀಕರಣವಾಗುತ್ತದೆ.

**೨೫. ಒಳ ಮೀಸಲಾತಿ ಹಾಗೂ ಜಾತಿ ಜನಗಣತಿ:**

ದಲಿತರಿಗೆ ಪ್ರತ್ಯೇಕ ರಾಜ್ಯ ಕೊಟ್ಟರೂ ಅಲ್ಲೂ ಮೇಲು ಕೀಳು ಎಂದು ಹೊಡೆದಾಟ, ಕೊಲೆಗಳಾಗಿ ಮತ್ತೆ ಪ್ರತ್ಯೇಕತೆ ಕೂಗಿನ ಪ್ರಶ್ನೆ ಏಳುತ್ತದೆ. ಚಾತುವರ್ಣದ ಜಾತಿ ಪದ್ಧತಿಯ ಶ್ರೇಣಿ ಅಳವಾಗಿ ಬೇರೂರಿ ಸಮಾನತೆಯ ಸಹಬಾಳ್ವೆಯು ಭಾರತೀಯರಿಗೆ ಅಸಹಜವಾಗಿದೆ. ಏನೋ ಮಾಡುವುದು ಇದು ವಿಪರ್ಯಾಸ.

ಇದಲ್ಲದೇ ಒಂದೇ ಕೋಮಿನಲ್ಲಿ ಹೆಚ್ಚು ಕಡಿಮೆ ಎಲ್ಲಾ ಜನಾಂಗಗಲ್ಲೂ ಎಡಗೈ ಬಲಗೈ ಎಂಬ ಪಂಗಡ ಇದ್ದೆ ಇರುತ್ತದೆ. ಕರ್ನಾಟಕದಲ್ಲಿ ೬ ಕೋಟಿ ಜನ ಸಂಖ್ಯೆಯಲ್ಲೇ ಸುಮಾರು ದಲಿತರೇ ೨ ಕೋಟಿ ಜನಸಂಖ್ಯೆ ಇದ್ದಾರೆ. ಉದಾ : ಕೊರಮ, ಕೋರಚ, ಭಜಂತ್ರಿ ಜನಸಂಖ್ಯೆ ೨೬ ಲಕ್ಷ ಬೋವಿ ೪೦ ಲಕ್ಷ ಲಂಬಾಣಿ ೩೫ ಲಕ್ಷ ಪರಿಶಿಷ್ಟ ಜಾತಿಯ ಎಡಗೈ ೭೦ ಲಕ್ಷ ಬಲಗೈ ೭೦. ಇದರಲ್ಲೇ ೨ ಕೋಟಿಗೂ ಮೇಲಿದೆ. ಇದರಿಂದ ಜನಸಂಖ್ಯೆಗೆ ಅನುಗುಣವಾಗಿ ಮೀಸಲಾತಿ ವರ್ಗೀಕರಣ ಅಗತ್ಯವಿದೆ. ಇದರೊಂದಿಗೆ ಮೀಸಲಾತಿಯನ್ನು ಈ ಕೆಳಕಂಡ ಎಲ್ಲಾ ಜಾತಿಗಳಿಗೂ ಅವಶ್ಯಕತೆಯಿದೆ.

೧. ಅಸ್ಪಶ್ಯರ ಬಲಗೈ ಪಂಗಡವೇನಾದರೂ ಪ್ರತ್ಯೇಕ ಮೀಸಲಾತಿ ಕೇಳಿದರೆ ನಾನು ಬೇಡ ಅನ್ನುತ್ತೇನೆ ಎಂದಿದ್ದಾರೆ ಮಹಾದೇವರವರು.

೨. ಆದರೆ ಎಡಗೈ ಪಂಗಡ ಪ್ರತ್ಯೇಕ ಒಳಮೀಸಲಾತಿ ಕೇಳುತ್ತಿದೆ ಬೇಡ ಎನ್ನಲು ನನಗೆ ಹಕ್ಕಿಲ್ಲವೇನೋ ಎಂಬ ಆಳುಕಿನಿಂದ ಸುಮ್ಮನಾಗಿದ್ದೆ, ಆದರೆ ನಾನೇ ಭಾಗಿಯಾಗಿ ಪ್ರತ್ಯೇಕತೆ ವರ್ಗೀಕರಣಕ್ಕೆ ಬೆಂಬಲ ನೀಡಲಾರೆ, ಏಕೆಂದರೆ ಇದರಿಂದ ಬೆಕ್ಕಿಗೆ ಕಜ್ಜಾಯ ಹಂಚಿದಂತಾಗುತ್ತದೆ.

೩. ಒಳಪಂಗಡಗಳ ನಡುವೆ ಅಸಮತೋಲನ ತಪ್ಪಿಸಲು ಸಮತೋಲನ ಬ್ಯಾಕ್‌ಲಾಗ್ ಪದ್ಧತಿ ರೂಪಿಸಬಹುದೇನೋ ಉದಾ : ಒಳ ಮೀಸಲಾತಿಗೆ ಒತ್ತಾಯಿಸುತ್ತಿರುವ ಎಡಗೈ ಗುಂಪು ಹೇಳುವಂತೆ ಉದ್ಯೋಗದಲ್ಲಿ ಶೇಕಡ ೨%ರಷ್ಟಿದೆ. ಆದರೆ ಜನಸಂಖ್ಯೆ ೭% ರಷ್ಟು ಇದೆ. ಇದು ನಿಜವಾದಲ್ಲಿ ಹಳೇ ಬಾಕಿ ಉದ್ಯೋಗ ಸಿಕ್ಕಿ ಸಮತೋಲನವಾಗುವವರೆಗೆ ಉಳಿದವರು ಕಾಯಬೇಕಾಗುತ್ತದೆ. ಇದೇ ನೀತಿ ಪರಸ್ಪರ ಎಲ್ಲರಿಗೂ ಅನ್ವಯಿಸುತ್ತದೆ. ಆದರೆ ಈ ಮಾತು ಖಚಿತವಾದ ಜಾತಿಯ ಜನಗಣತಿ ಆಧಾರದ ಮೇಲೆ ನಿಂತಿದೆ.

೪. ಪ್ರತ್ಯೇಕ ಮೀಸಲಾತಿ ವರ್ಗೀಕರಣ ಬೇಕೆಬೇಕು ಅನ್ನುವಂತಾದರೆ ಉಪಜಾತಿಗಳು ತಂತಮ್ಮಲ್ಲೇ ಹೋರಾಡದೆ ನ್ಯಾಯಾಲಯ ರಾಜಕೀಯ ಒತ್ತಡದಿಂದ ಪಡೆಯುವ ವಿವೇಕ ಉಳಿಸಿಕೊಂಡರೆ ಒಳ್ಳೆಯದು ಎಂದು ಅಶಿಸುವೆ.

ಜೊತೆಗೆ ಕೆಲವು ಎಚ್ಚರಿಕೆ ಅಗತ್ಯ. "ಇಂದೂ ಸುಳ್ಳು ಜಾತಿ ಪ್ರಮಾಣ ಪತ್ರ ಕೊಟ್ಟು ಸರ್ಕಾರದ ಎಲ್ಲಾ ಸವಲತ್ತು ಅಧಿಕಾರಗಳನ್ನು, ಪಡೆದು ಅನುಭವವಿಸುವ ಬೇರೆ ಜಾತಿಯವರ ಬಗ್ಗೆ ಗಮನ ಹರಿಸಬೇಕು"[12] ಹಾಗೂ ಸರ್ಕಾರಿ ವಲಯದಂತೆ ಖಾಸಗಿ ವಲಯಗಳಿಗೂ ಪ್ರತ್ಯೇಕ ಮೀಸಲಾತಿ ಕೇಳುವುದು ಅನಿವಾರ್ಯವಾಗಿದೆ. ನಿಜವಾದ ಒಳಮೀಸಲಾತಿ ಸಲ್ಲುವವರು ಈ ಕೆಳಗಿನಂತಿದ್ದಾರೆ.

೧. ಒಳಪಂಗಡದ – ನಿರುದ್ಯೋಗ ವಿವಾಹಿತರಿಗೆ
೨. ತಲಾಂತರದಿಂದ ಬಂದಂತಹ – ಕಸುಬುವಿನವರಿಗೆ
೩. ಅನಕ್ಷರಸ್ಥರ ಮಕ್ಕಳಿಗೆ
೪. ಊರಾಚೆ ಇರುವವರಿಗೆ
೫. ಗ್ರಾಮೀಣ ಪ್ರದೇಶದಲ್ಲಿರುವ ಮಕ್ಕಳಿಗೆ
೬. ಅಂತರ್ಜಾತಿಯ ವಿವಾಹವಾದವರ ಮಕ್ಕಳಿಗೂ ಅನ್ವಯವಾಗಬೇಕೆಂಬುದು ನನ್ನ ಆಶಯವಾಗಿದೆ ಕ್ಷಮಿಸಿ, ಆದರೆ ಇದು ಯಾರಿಗೂ ಬೇಡವಾಗಿದೆ.

ಜಾತಿ ಎನ್ನುವ ಪದವನ್ನು ಬಳಸಲು ಬೇಸರವಾಗಿದೆ. ಇನ್ನು ಮೇಲೆ ಕೀಳುಜಾತಿ ಎನ್ನುವ ಬದಲು ತಳಸಮುದಾಯ ಎಂದು ಸಂಬೋಧಿಸುವುದು ಉತ್ತಮವಾಗಿದೆ.

**೨೬. ನಾನು ಗಾಂಧಿ ಚಿತ್ರ ನೋಡಿದೆ / ಆಕಾಶಕ್ಕೆ ಎರಡು ಗೇಣು ಕಮ್ಮಿ:**

ದೇವನೂರು ಮಹಾದೇವ ಒಂದು ಜನಾಂಗಕ್ಕೆ ಒಂದು ಸಾಹಿತ್ಯಕ್ಕೆ ಸೀಮಿತವಾಗಿಲ್ಲ. ಅವರು ವಿಶಾಲ ಮನೋಭಾವದವರು. ಎಲ್ಲರೂ ಅವರ ದೃಷ್ಟಿಯಲ್ಲಿ ಒಂದೇ ಒಮ್ಮೆ ಗಾಂಧೀಜಿಯವರ ಜೀವನಾಧಾರಿತ ಚಿತ್ರ ಬಿಡುಗಡೆಗೊಂಡಾಗ ದಲಿತರು ಈ ಚಿತ್ರದ ಬಿಡುಗಡೆಗೆ ತೊಂದರೆ ಪಡಿಸಿದ್ದಾರೆ. ಜೊತೆಗೆ ಟಾಕೀಸುಗಳಲ್ಲಿ ಗಲಾಟೆ ಮಾಡಿದ್ದರೂ ಜೊತೆಗೆ

[12] ಮೀಸಲಾತಿ ವರ್ಗೀಕರಣ – ಸಿ.ಕೆ.ಮಹೇಶ್ – ಪುಟ – ೬೭

ಆಂಧ್ರ ಮದ್ರಾಸ್‌ನಲ್ಲಿ ಟಾಕೀಸುಗಳಿಗೆ ಹಾವು ಬಿಡುವ ಪ್ರಸಂಗಗಳೂ ನೆನಪಿಗೆ ಬಂದವು. ಶ್ರೀನಿವಾಸಪ್ರಸಾದ್‌ರ ತಮ್ಮ ರಾಮಸ್ವಾಮಿ ಟಾಕೀಸನವರ ಮೇಲೆ ಗಲಾಟೆ ಮಾಡುವ ಮೊದಲು ನನ್ನ ಭೇಟಿಯಾಗಿದ್ದ. ಆವಾಗ ಲೇಖಕರು, ಗಾಂಧಿ ಚಿತ್ರದಲ್ಲಿ ಅಂಬೇಡ್ಕರ್ ಇಲ್ಲದ ಚಿತ್ರವಾದರೆ ಅದು ಅಪೂರ್ಣವಷ್ಟೇ ಎಂದು ಹೇಳಿ ಸಮಾಧಾನಪಡಿಸಿ, ತಾವು ಮಾತ್ರ ಬೆಂಗಳೂರಿಗೆ ಬಂದು ಗಾಂಧಿ ಚಿತ್ರ ನೋಡಿದಾರೆ ಇವರ ಮಿತ್ರ ಗೋವಿಂದಯ್ಯ ಸಹ ಎರಡು ಬಾರಿ ನೋಡಿದ್ದಾರೆ.

ಗಾಂಧಿ ಚಿತ್ರದಲ್ಲಿ ಗಾಂಧಿ ಮಹಾತ್ಮನಾಗಬೇಕಾದರೆ ಅಂಬೇಡ್ಕರರ ಅದಮ್ಯ ಚೇತನವೂ ಕಾರಣ ಎಂಬುದರಲ್ಲಿ ನನಗೆ ಈಗಲೂ ಅನುಮಾನವಿಲ್ಲ, ಆದರೆ ಗಾಂಧಿಗೆ ಅಫ್ರಿಕಾದಲ್ಲಿ ಅಸ್ಪೃಶ್ಯನಾಗುವ ಅಸ್ಪೃಶ್ಯತನವೇ ಅವನಿಗೆ ದಿಕ್ಕು ತೋರಿಸುತ್ತದೆ.

ಜೊತೆಗೆ ಅಸ್ಪಶ್ಯನಾಗುವುದಾದರೆ ಮುಂದಿನ ಜನ್ಮದಲ್ಲಿ ಆಗುವೆ ಎಂದು ಬಯಸುತ್ತಾರೆ ಹಾಗೂ ಭಾರತ ದೇಶ ಎರಡಾಗುವುದಾದರೆ ನನ್ನ ಹೆಣದ ಮೇಲಾಗಬೇಕೆಂದು ನುಡಿದ ಗಾಂಧಿ ತಮ್ಮ ನುಡಿಯನ್ನು ಉಳಿಸಿಕೊಂಡಿದ್ದಾರೆ. ಕ್ರಿಸ್ತನ ಮಟ್ಟಕ್ಕೆ ಮುಟ್ಟುತ್ತಿದ್ದರು ಎನ್ನುವ ಡಾ.ಲೋಹಿಯವರ ಮಾತಿನ ಸತ್ಯತೆ, ಅದರಿಂದ ಗಾಂಧೀಜಿ ಈ ಒಂದು ಕೊರತೆಯಿಂದ ನಮ್ಮ ಯುಗದ ಎತ್ತರದ ಪುರುಷನಾಗಿ ಆಕಾಶಕ್ಕೆ ಮುಟ್ಟಲು ಎರಡು ಗೇಣು ಕಮ್ಮಿ ಎಂಬಂತೆ ಕಾಣಿಸುತ್ತಾರೆ.

**೨೭. ಆದಶಕದ ಬಿಡುಗಡೆಯ ಮಾತು:**

ದೇವನೂರು ಮಹಾದೇವರ ಶ್ರೀಮತಿ.ಸುಮಿತ್ರಬಾಯಿ, ರೈತ ಸಂಘದ ಕಡಿದಾಳು ಶಾಮಣ್ಣ ಪೋನ್ ಮಾಡಿದ್ದರು. ಅವರ ಪುಸ್ತಕದ ಬಿಡುಗಡೆಯಂತೆ ಹೋಗಿದ್ದು ಬನ್ನಿ ಅಂದರು. ಸುಮಾರು ೫ ವರ್ಷಗಳ ನಂತರ ಇದೇ ಮೊದಲ ಬಾರಿಗೆ ಹೋಗಿದ್ದು ಬನ್ನಿ ಎಂದರು.

ಕಡಿದಾಳು ಶಾಮಣ್ಣನವರನ್ನು ರೈತ ಸಂಘದ ರಾಜ್ಯ ಸಮಿತಿಯಿಂದ ಹೊರ ಹಾಕಲಾಗಿತ್ತು. ಆದರೂ ಪ್ರತಿಭಾವಂತರು, ಹೋರಾಟಗಾರರ ಇವರು ಸಭೆ ಸೇರಿದರೆ, ದಲಿತ ಸಂಘರ್ಷ ಸಮಿತಿ ನೋ, ರೈತ ಸಂಘರ್ಷ ಪ್ರಗತಿಪರ ಚಳುವಳಿಯ ಸಂಘಟನೆಗಳೇ ಸೇರುತ್ತಿತ್ತು. ಏಕೆಂದರೆ ಶಾಮಣ್ಣ ಎಲ್ಲರಿಗೂ ಪ್ರೀತಿ ಪಾತ್ರರಾಗಿದ್ದರು. ಹಾಗೆಯೇ ಶಾಮಣ್ಣ ಒಂದು ರೀತಿಯಲ್ಲಿ ೧೨ನೇ ಶತಮಾನದ ಬಸವಣ್ಣನಂತೆ ಅಲ್ಲಿನ ಶರಣರು ವಚನಕಾರರ, ಸಾವಿರಾರು ಭಕ್ತ ಜನರನ್ನು ಒಂದೇ ಕಡೆ ಸೇರಿಸಿ ಅವರೆಲ್ಲ ಮನಸ್ಸನ್ನು ಗೆದ್ದ ಬಸವಣ್ಣನವರಂತೆ ಎಲ್ಲರನ್ನು ಸರಿದೂಗಿಸುವುದು ಕಷ್ಟವಾಗಿದೆ. ಅನುಯಾಯಿಗಳು ಬೇರೆ ಬೇರೆ ಜಾತಿ ವೃತ್ತಿಯವರಾದರೂ ಎಲ್ಲರ ಗುರಿ ಅದು ಅಂತರ್‌ಜಾತಿಗಳ ವಿಲೀನತೆಯಾಗಿತ್ತು.

ಸಹನೆ ಮತ್ತು ಪ್ರೀತಿ ನನ್ನ ಧರ್ಮ. ಒಂದುಕಡೆ ಗಾಂಧಿಯವರ ಮಾತಿನಂತೆ ಪ್ರೀತಿ ಇದ್ದ ಕಡೆ ಸಹನೆ ಇದ್ದೆ ಇರುತ್ತದೆ. ಆದರೆ ಸಹನೆ ಬೇಕಾಗಿರುವುದು ನಾವು ಇಷ್ಟಪಡದ ವ್ಯಕ್ತಿ

ಅಥವಾ ವಿಚಾರ ಕಣ್ ಮುಂದೆ ಇರಬಾರದು. ಹೀಗಿಯೇ ನಾವು ಬದುಕುತ್ತಿರುವ ಸಂದರ್ಭಕ್ಕೆ ಬಂದರೆ ನಮ್ಮ ವ್ಯವಸ್ಥೆ ಪ್ರಭುತ್ವ ದಿಗಿಲು ಹುಟ್ಟಿಸುವಂತಹದ್ದು. ಕಳ್ಳತನಕ್ಕೂ ಒಂದು ನೀತಿ ನಿಯಮವಿದೆ. ರೌಡಿಸಂ ಕೂಡ ನೀತಿ ನಿಯಮವಿದೆ ನಾಚಿಕೆ ಇರುತ್ತದೆ. ಆದರೆ ಇಂದು ಈ ಕಳ್ಳತನ ದರೋಡೆಗಳು ನಾಚಿಕೆ ಬಿಟ್ಟು ಎಲ್ಲ ಕ್ಷೇತ್ರದಲ್ಲೂ ಕುಣಿದು ಕುಪ್ಪಳಿಸುತ್ತದೆ. ಪ್ರಜಾಪ್ರಭುತ್ವಕ್ಕೆ ನೇಣು ಬಿಗಿಯುವ ಅಪರೇಷನ್ ಕಮಲವನ್ನು ಸಮರ್ಥಿಸಿಕೊಂಡಿರುತ್ತಾರೆ.

ಹತ್ತು ವರ್ಷಗಳಲ್ಲಿ ಹತ್ತಾರು ಸಾವಿರಕೋಟಿ ನುಂಗಿ ನೀರು ಕುಡಿದ ಗಣಿ ರೆಡ್ಡಿ ಪಟಾಲಂ ಆಡುವ ಮಾತುಗಳನ್ನು ಕೇಳಿದರೆ ತಪ್ಪು ಮಾಡಿ ತಿದ್ದಿಕೊಳ್ಳುವ ವ್ಯಕ್ತಿ ಹಾಡುವ ಮಾತಲ್ಲ. ಇನ್ನೊಂದಡೆ ರಾಜ್ಯದ ಸ್ಥಿತಿಗತಿಗಳನ್ನು ರಾಜ್ಯಪಾಲರು ಕುರಿತು ಬೇಗ ಪರಿಹಾರ ಕಾರ್ಯಗಳನ್ನು ಬಿಡುಗಡೆ ಮಾಡಿ ಎಂದರೆ ವಿಳಂಬವಾಗಿಲ್ಲ ಎಂದು ಮುಖ್ಯಮಂತ್ರಿ ಹೇಳುತ್ತಾರೆ. ಇದೆಂಥ ನಾಚಿಕೆಗೇಡಿನ ಸರ್ಕಾರ.

ಸರ್ಕಾರಗಳು ದಿನಕ್ಕೊಂದು ಹೊಸ ಕಾನೂನು ತರುವ ಸಂದರ್ಭದಲ್ಲಿ ಮೀಸಲಾತಿಯ ವರ್ಗೀಕರಣ ಒಂದು ಸಮಸ್ಯೆಯಾದರೆ ಜಂಗಮರು ನಮ್ಮನ್ನು ಲಿಂಗಾಯಿತ ಜನಾಂಗವೆನ್ನದೆ ಬೇಡವ ಜಂಗಮರು ಆದರಿಂದ ನಮ್ಮನ್ನು ಪರಿಶಿಷ್ಟ ಜಾತಿಗೆ ಸೇರಿಸಿಕೊಳ್ಳಿರೆಂದು ದೊಡ್ಡ ಸಭೆ, ಉಪವಾಸ ಅಂದೋಲನ ಕಾರ್ಯಕ್ರಮ ಜರುಗುತ್ತಿದೆ.

ಇನ್ನೊಂದು ಕಡೆ ಭಾರತದ ಕಂಪನಿಗೆ ಪರದೇಶದಿಂದ ಒಂದು ಹೊರಗುತ್ತಿಗೆ ಕೆಲಸ ಸಿಗುತ್ತದೆ. ಕೆಲಸ ಎಂದರೆ ಭಾರತ ಕಂಪನಿಯ ಗೌರವಾನ್ವಿತ ನೌಕರರು ಹೊರದೇಶದ ಗ್ರಾಹಕರಿಗೆ ಪೋನ್ ಮೂಲಕ ಮಾತಾಡಿ ಏನೆಂದರೆ ಅಲ್ಲಿನ ಹೆಣ್ಣಿಗೆ ಇಲ್ಲಿ ಗಂಡು ಕಾಮೋದ್ರೇಕದ ಮಾತಾಡಿ ಸ್ಖಲಿಸುವಂತೆ ಮಾಡಬೇಕು. ಹಾಗೇಯೇ ಅಲ್ಲಿನ ಹೆಣ್ಣಿಗೆ ಇಲ್ಲಿನ ಗಂಡು ಮಾತಾಡಿ ಸ್ಖಲಿಸುವಂತೆ ಮಾಡುವುದಾಗಿದೆ. ಇದು ಈಗಿನ ವಿದೇಶಿ ಕಂಪನಿಗಳೊಂದಿಗಿನ ವ್ಯಾಪಾರ ಸಂಬಂಧಗಳೆನಿಸಿವೆ.

ಮನುಷ್ಯ ಕೇಂದ್ರಿತ, ಆರ್ಥಿಕತೆ ಹಾಗೂ ಜಗತ್ತು ಒಂದು ಕುಟುಂಬ ಎಂಬ ಕನಸು ನನಸು ಮಾಡುವುದಕ್ಕಾಗಿ ಗಾಂಧಿ ಬೇಕು. ಅಂದರೆ ಗಾಂಧಿ, ಅಂಬೇಡ್ಕರ್ ಮತ್ತು ವಚನಕಾರರ ಮಿಶ್ರಣಕ್ಕೆ ಎಲ್ಲ ಸಮನತಾ ಆಶಯಗಳನ್ನು ಕೂಡಿಸಿ ಇದಕ್ಕಾಗಿ ಸ್ವಾತಂತ್ರ್ಯ ಹೋರಾಟ ತೀವ್ರತೆಯಲ್ಲಿ ಹೋರಾಡಬೇಕು.

"ಈ ಜಾಗತೀಕರಣ ಖಾಸಗೀಕರಣ, ಉದಾರೀಕರಣ, ಅಂತಃಕರಣ ಇಲ್ಲ. ಇದು ಕಡಿದಾಳು ಶಾಮಣ್ಣನವರ ಮಾತು. ಇದು ಜಗತ್ತಿನ ಗೋಡೆ ಬರಹ ಆಗಬೇಕಿದೆ. ಅಂತಃಕರಣಕ್ಕಾಗಿ ಉದಾರೀಕರಣ, ಅಂತಃಕರಣಕ್ಕಾಗಿ, ಜಾಗತೀಕರಣ, ಅಂತಃಕರಣಕ್ಕಾಗಿ ಖಾಸಗೀಕರಣ ಹೀಗೆ ನಮ್ಮ ಹೆಜ್ಜೆಗಳು ಮಾನವತೆಯ ಸಮಾನತೆಯ ನೆಲೆಯಲ್ಲಿ ಸಾಗಬೇಕಿದೆ".[೧೩]

---

[13] ಪ್ರಜಾವಾಣಿ ಪತ್ರಿಕೆ – ವಾಚಕರ ವಾಣಿ – ಪುಟ ೬ ಏಪ್ರಿಲ್ ೧೪, ೨೦೧೩

# ಅಧ್ಯಾಯ ೩.೨

## ರಾಜಕೀಯ

ಎದೆಗೆ ಬಿದ್ದ ಅಕ್ಷರ ಕೃತಿಯಲ್ಲಿ ರಾಜಕೀಯ ವಿಚಾರಧಾರೆಗಳನ್ನು ಕೆಳಕಂಡ ಲೇಖನಗಳಲ್ಲಿ ವಿವರಿಸುತ್ತಾ ಇಂದು ಎಲ್ಲೋ ಒಂದು ಕಡೆ ನಿಜವಾದ ರಾಜಕೀಯ ಸ್ಥಾನಮಾನಗಳೇ ವ್ಯಕ್ತಿಯ ವ್ಯಕ್ತಿತ್ವಕ್ಕೆ ಬೆರಗು ನೀಡುತ್ತದೆ. ರಾಜಕೀಯದಿಂದ ಮಾತ್ರ ದೇಶದಲ್ಲಿ ಬದಲಾವಣೆ, ಪರಿವರ್ತನೆ, ಸುಧಾರಣೆ ತರಲಿಕ್ಕೆ ಸಾಧ್ಯ. ಆದರಿಂದ ರಾಜಕೀಯವೆಂಬ ಆಯುಧ ಬಳಸಿ ಸಮಾಜದಲ್ಲಿನ ಸಮಾನತೆ, ಸಾಮಾಜಿಕ ನ್ಯಾಯ ಪರಿಹಾರಗಳನ್ನು ಪಡೆದುಕೊಳ್ಳಲು ಸಾಧ್ಯ.

೧. **ದನಿ ಇಲ್ಲದೇ ಮಲಗಿರುವವರ ದನಿಯಾಗಿಯೂ:** ಸಾಮಾಜಿಕ ನ್ಯಾಯ, ಸಮಾನತೆ, ಶೋಷಣೆ ಅನ್ಯಾಯಗಳ ವಿರುದ್ದ ತಲೆ ಎತ್ತಿ ನಿಲ್ಲಲು ರಾಜಕೀಯವೆಂಬ ಅಸ್ತ್ರ ಬಳಸಬೇಕು. ನಮ್ಮ ಜನತೆ ಅನಕ್ಷರಸ್ಥರಾಗಿವುದರಿಂದಲೇ ಪರಂಪರೆಯಿಂದ ಮೇಲ್ವರ್ಗದವರಿಗೆ ಹೆಂಡ, ಬಾಡಿಗಾಗಿ, ತಮ್ಮ ಜೀವನವನ್ನೇ ಮುಡುಪಾಗಿಸಿ, ತಮ್ಮ ಓಟು, ಹಕ್ಕು, ಮನಸತ್ವ ಕೊನೆಗೆ ತಮ್ಮ ತನವನ್ನೇ ಮಾರಿಕೊಂಡು ಗುಲಾಮರಾಗಿ ಬದುಕುತ್ತಿದ್ದಾರೆ. ಇವರಿಂದ ಮೋಕ್ಷ ಪಡೆಯಲು ನಮ್ಮವರೇ ನಮ್ಮನ್ನು ಅಳುವ ರೀತಿ ನೀತಿಗಳನ್ನು ಕಂಡು ಕೊಳ್ಳಬೇಕು ಎನ್ನುವ ದೃಷ್ಟಿಕೋನದಿಂದ ಬ್ರಿಟೀಷರು ಈ ದೇಶಕ್ಕೆ ಸ್ವಾತಂತ್ರ್ಯ ನೀಡಲು ಮುಂದಾದಾಗ, ಅಂಬೇಡ್ಕರ್ ದೇಶಕ್ಕೆ ಸ್ವಾತಂತ್ರ್ಯ ಬಂದ ಮೇಲೆ ದಲಿತರಿಗೆ ಪ್ರತ್ಯೇಕ ದೇಶ ಕೇಳಿದರು ಆದರೆ ಅಂಬೇಡ್ಕರ್ ಮಾತಿಗೆ ಗಾಂಧಿ ಈ ದೇಶ ಎರಡಾಗುವುದಾದರೆ ಅದು ನನ್ನ ಹೆಣದ ಮೇಲೆ ಅಂತ ಹೇಳಿ ಕೊನೆಗೆ ಪ್ರತ್ಯೇಕ ರಾಜಕೀಯ ಹಕ್ಕನ್ನು ನೀಡುತ್ತೇವೆ ಎಂದು ಹೇಳಿ ರಾಜಕೀಯ ಮೀಸಲಾತಿಯನ್ನು ನೀಡಿದ್ದರು ಅದರೆ ಆದರಿಂದ ಯಾವುದೇ ಬದಲಾವಣೆಯಾಗದಂತೆ ಗೆದ್ದ ವ್ಯಕ್ತಿಗಳನ್ನು ಕೇವಲ ರಬ್ಬರ್ ಸ್ಟಾಂಪ್ ಮಾಡಿ ಪರಂಪರೆಯಿಂದ ಮೇಲ್ವರ್ಗದವರೇ ಆಳ್ವಿಕೆ ನಡೆಸುತ್ತಿದ್ದಾರೆ. ವಿನಹ ದಲಿತರಿಗೆ ಆಳುವ ಅವಕಾಶ ಸಿಗಲಿಲ್ಲ, ಸಿಕ್ಕಿದ್ದರೂ ಅದು ನೆಪಮಾತ್ರ. ಉದಾ : ಈ ದೇಶದಲ್ಲಿ ಡಾ.ಬಾಬು ಜಗಜೀವನರಾಂ ಪ್ರಧಾನಿಯಾಗುವ ಆರ್ಹತೆ ಇದ್ದರೂ ಕೇವಲ ದಲಿತ ಎನ್ನುವುದಕ್ಕಾಗಿ ಅವರನ್ನು ಉಪಪ್ರಧಾನಿ ಮಾಡಿದರು. ಆದರೆ ಮೊದಲ ಬಾರಿಗೆ ಉತ್ತರ ಪ್ರದೇಶದಲ್ಲಿ ಈ ಕನಸನ್ನು ನನಸಾಗಿಸುವ ಕೆಲಸವನ್ನು ಬಿ.ಎಸ್.ಪಿ.ಪಕ್ಷದ ಮಾಯವತಿ ಮಾಡಿದ್ದರು.

ಮಾವೋ ಹೇಳುತ್ತಾನೆ. “ಒಳ್ಳೆಯ ಸಾಹಿತ್ಯವಲ್ಲದ್ದು ಒಳ್ಳೆಯ ರಾಜಕೀಯವೂ ಅಲ್ಲ”. ಕಾಳಿದಾಸನ ರಘುವಂಶದ ಕತೆಯಲ್ಲಿ ರಾಜ, ಆಡಳಿತದಲ್ಲಿ ತನ್ನ ನ್ಯೂನತೆಯನ್ನು ತೋರಿಸಿದ ಹಾಗೇ ತನ್ನ ಗಂಟಿದ ‘ತೊನ್ನು ರೋಗ’ ವನ್ನು ಮರೆಮಾಚುತ್ತಾ ಬಂದು ಕೊನೆಗೆ ಇಡೀ ದೇಹವನ್ನೇ ಅವರಿಸಿದಾಗ ಕಾಲಿನ ಪಾದ ತೋರಿಸಿ ಆಡಳಿತ ನಡೆಸುತ್ತಿದ್ದರು. ಈ ರೀತಿ ದುಃಸ್ಥಿತಿ ರಾಜಕೀಯದ ಆಡಳಿತದಲ್ಲಿದೆ. ಅಂದರೆ ಹೊರನೋಟಕ್ಕೆ ಭಾರತ ಅಭಿವೃದ್ಧಿಯಾಗುತ್ತಿದೆ. ಇದಕ್ಕಾಗಿ ಸಾವಿರಾರು ಕೋಟಿ ಹಣವನ್ನು ವಿದೇಶಗಳಿಂದ ವಿಶ್ವಸಂಸ್ಥೆ

ಯುನೆಸ್ಕೋನಿಂದ ಸಾಲಪಡೆದು, ತಾವೇ ತಿಂದು-ತೇಗಿ, ಬಡವರನ್ನು ಸಾಲಗಾರರೆಂದು ನಂಬಿಸುತ್ತಾರೆ.

### ೨. ಆನೆ ಮೇಲೆ ಹೋಗಿ ಆದರೆ

ಈ ಲೇಖನದಲ್ಲಿ ಲೇಖಕರು ಬಹಳ ನೋವಿನ ವೇದನೆಯನ್ನು ಹಂಚಿಕೊಂಡಿದ್ದಾರೆ. ರಾಜಕೀಯದಲ್ಲಿ ಯಾವ ಪಕ್ಷಗಳಿಗೆ ಬೆಂಬಲ ಸೂಚಿಸಬೇಕೆಂಬ ವಿವರಣೆನ್ನು ತಿಳಿಸುತ್ತಾ ಇಂದಿನ ಪರಿಸ್ಥಿತಿಯನ್ನು ಪರಿವರ್ತನೆಗೆ ತರಲು ರಾಜಕೀಯ ಅತಂತ್ಯ ಅಗತ್ಯ ನಿರ್ಣಾಯಕ ಅಂದುಕೊಂಡಿದ್ದೆನೆ. ರಾಜಕೀಯ ಮಾಡುವ ಪರಿಸ್ಥಿತಿ ಅರ್ಥಮಾಡಿಕೊಳ್ಳದೆ ಬಿ.ಎಸ್.ಪಿ.ಗೆ ನೀವು ಸೇರುವ ಮೊದಲನೇ ಅದನ್ನು ನಾನು ಬೆಂಬಲಿಸಿದ್ದೆ. ಯಾವಾಗ ಬಿಜೆಪಿಯ ಜೊತೆಗೆ ಬಿ.ಎಸ್.ಪಿ. ಕೈ ಜೋಡಿಸಿತು. ಮಾರನೆಯ ದಿನವೇ ಅದನ್ನು ವಿರೋಧಿಸಿದೆ. ಏಕೆಂದರೆ,'ಅಂಬೇಡ್ಕರವರು ಹೇಳುವಂತೆ' ಒಂದು ಜನಾಂಗದ ಹಿತಕ್ಕೆ ವಿರುದ್ಧವಾದುದ್ದು ಮತ್ತೊಂದು ಜನಾಂಗದ ಹಕ್ಕು ಎನ್ನುವ ಸಮಾಜ ನಮ್ಮದು. ಇಂಥ ಸಮಾಜದಲ್ಲಿ ಶೋಷಿತ ವರ್ಗಗಳು ಬ್ರಾಹಣರ ರಾಜಕೀಯ ಪಕ್ಷದಲ್ಲಿ ಸಹಕರಿಸಲು ಒಪ್ಪಿಕೊಂಡರೆ ಇಲ್ಲಿ ಶೋಷಿತ ವರ್ಗಗಳ ಹಿತ ಕಾಪಾಡಬಹುದೇ? ವಿನಹಃ ಪರವಾಗಿ ಯಾವ ಕೆಲಸಗಳು ಆಗಲಾರವು. ಎಲ್ಲ ವೈರುಧ್ಯ ನೆಲೆಯಲ್ಲಿ ನಡೆಯುವುವು.

ಇದಕ್ಕೆ ಬ್ರಾಹ್ಮಣ ರಾಜಕೀಯ ಮಾಡುವ ವ್ಯಕ್ತಿಗಿಂತ ರಾಜಕೀಯವನ್ನು ತಾತ್ವಿಕಗೊಳಿಸಿದ ರಾಜಕಾರಣದ ಪಕ್ಷಗಳು ಶತ್ರುಗಳು ಎಂಬುದರ ಅರಿವು ನಮಗಿರಬೇಕು. ಜೊತೆಗೆ ಪರಂಪರೆಯಿಂದ ಬ್ರಾಹ್ಮಣರು ಅಸಮಾನತೆಯನ್ನು ತಾತ್ವಿಕಗೊಳಿಸುವವರು ಆದರಿಂದ ಅವರು ನಮಗೆ ಸಾವಿರ ಪಾಲು ದುಷ್ಟರು. ಆದರಿಂದ ಅವರ ಹೊಂದಾಣಿಕೆಯಲ್ಲಿ ಇವುಗಳನ್ನು ನೋಡಬೇಕು. ವಿನಹ ಪ್ರಜ್ಞಾ ರಹಿತ ರಾಜಕೀಯದ ಹಿನ್ನಲೆ ನೋಡಬಾರದು. ಬಿ.ಎಸ್.ಪಿ. ಪಕ್ಷದವರಿಗೆ ನೀವು ಆನೆ ಮೇಲೆ ಪಾರ್ಲಿಮೆಂಟಿಗೆ ಹೋಗುವದನ್ನು ನಾನು ಸ್ವಾಗತಿಸುತ್ತೇನೆ. ಆದರೆ ಪ್ರಜ್ಞಾ ಹೀನರಾಗಿ ಕತ್ತೆ ಮೇಲೆ ಕೂರಬೇಡಿ ಎಂಬ ವಿನಂತಿಯನ್ನು ತಿಳಿಸುತ್ತಾ ರಾಜಕೀಯ ಎಚ್ಚರಿಕೆಯ ಜಾಗೃತಿ ಮೂಡಿಸಿದ್ದಾರೆ.

### ೩. ದಲಿತ ಮನಸ್ಸಿನ ದುಗಡದಲ್ಲಿ-

ಲೇಖಕರು ಒಂದು ರಾಜಕೀಯ ಪಕ್ಷಕ್ಕೆ ಸೀಮಿತವಾಗಿರುವ ದಲಿತರ ಬದುಕನ್ನು ಎಚ್ಚರಿಸುತ್ತಾರೆ. ೧೯೭೭ರ ಯುಗಾದಿ ಹಬ್ಬದ ದಿನ ದೇಶದಲ್ಲಿ ಇಂದಿರಾಗಾಂಧಿಯ ಕಾಂಗ್ರೇಸ್ ಪಕ್ಷ ಸೋತು ಜನತಾ ಪಕ್ಷ ಆಡಳಿತಕ್ಕೆ ಬಂದಾಗ, ದಲಿತ ಕೇರಿಯಲ್ಲಿನ ಒಂದು ಮನೆಯ ಸೊಸೆ ಹಬ್ಬದ ಅಡಿಗೆ ಮಾಡಿ ಅತ್ತೆಯನ್ನು ಊಟಕ್ಕೆ ಕರೆದಾಗ 'ಅಯ್ಯೋ ಹೋಗವ ಎಂಥ ಸುಡಗಾಡ್ ಊಟ, ಇಂದ್ರಮ್ಮನ ಮನೇಲಿ ಓಲೆ' ಹತ್ತಿದಾರೋ ಇಲ್ವೋ ಅಡಿಗೆ ಮಾಡಿದ್ದರೂ ಇಲ್ವೋ" ಎಂಬ ಕಾಳಜಿ ನಿಜಕ್ಕೂ ದಲಿತರಿಗೆ ಕಷ್ಟದಲ್ಲಿ ಸ್ಪಂದಿಸುವಂತಹ ವಿಶಾಲ ಮನಸ್ಸಿನವರು ಯಾರಿಗೆ ನೋವಾದರೂ ಅದು ತನಗೆ ಆದಂತೆ ಕಾಂಗ್ರೇಸ್ ಸೋತರೆ ದಲಿತರೇ ಸೋತಂತೆ ಎಂದು ಬದುಕನ್ನೇ ಕೈಚೆಲ್ಲಿ ಕುಳಿತುಕೊಳ್ಳುವರು.

## ೪. ಹೆಂಡ ಬೀರು ಮತ್ತು ದಲಿತರು:

ಮದ್ಯಪಾನದ ಬಗ್ಗೆ ಮೂರು ಹೇಳಿಕೆಗಳಿವೆ. ನಮ್ಮ ಜನಾಂಗದ ನಾಯಕರು ಈ ರೀತಿ ಹೇಳಿಕೆ ನೀಡಿದ್ದಾರೆ.

೧. ಮದ್ಯಪಾನ ರದ್ದಾಗಲಿ – ಟಿ.ಎನ್.ನರಸಿಂಹಮೂರ್ತಿ
೨. ಹೆಂಡದ ಬದಲು ಬೀರು ಕುಡಿಯಿರಿ – ಶ್ರೀ ಎನ್.ರಾಚಯ್ಯ
೩. ಹೆಂಡ ಕುಡಿಯಿರಿ – ಸಿದ್ದಲಿಂಗಯ್ಯ

ಕುಡಿಯವವರ ಕೈಲಿ ಸರ್ಕಾರ ಕೊಟ್ಟರೆ ಯಾವುದೇ ಕಾರಣಕ್ಕೂ ಮದ್ಯಪಾನ ರದ್ದಾಗುವುದಿಲ್ಲ. ಸರ್ಕಾರ ನಡೆಯುವುದೇ ಅದರಲ್ಲಿ. ಹೆಂಡದ ಬದಲು ಬೀರು ಕುಡಿಯುವುದು ಆರ್ಥಿಕ ಸಂಕಷ್ಟಕ್ಕೆ ಗುರಿ ಮಾಡುತ್ತದೆ. ಇವತ್ತು ವಿದ್ಯಾವಂತ ಸಮೂಹ ಇದನ್ನೇ ಮಾಡುತ್ತಿರುವುದು ಇದರಿಂದ ಸಮಾಜ ಇನ್ನೂ ಹದಗೆಟ್ಟಿದೆ.

ಇವತ್ತಿನ ಯುವಜನತೆಗೆ ಹೆಂಡವನ್ನು ಕುಡಿಯಿರಿ ದನದ ಬಾಡನ್ನು ತಿನ್ನಿ ಇದು ಅಂತರರಾಷ್ಟ್ರೀಯ ಆಹಾರ. ದಲಿತರು ಬದುಕಿರುವುದೇ ಹೆಂಡ–ಬಾಡಿಗಾಗಿ ಎಂದು ಕೊಂಡು ಸವರ್ಣಿಯರು ಪ್ರತಿಯೊಂದು ರಾಜಕೀಯದ ಚುನಾವಣೆಗಳಲ್ಲಿ ಇವರಿಗೆ ಹೆಂಡ ಬಾಡು ಕೊಟ್ಟರೆ ಓಟು ಹಾಕ್ತಾರೆ ನಂಬಿಕೆಯಿಂದ ಇಲ್ಲಿಯವರೆಗಿನ ಕಾಂಗ್ರೇಸ್ ಸರ್ಕಾರ ದಲಿತರನ್ನು ಇದೇ ರೀತಿಯಲ್ಲಿ ನಡೆಸಿಕೊಂಡು ಆಳ್ವಿಕೆ ನಡೆಸಿಕೊಂಡು ಬಂದಿದೆ. ಇನ್ನು ಮುಂದಾದರೂ ಮದ್ಯಪಾನ ಬಿಟ್ಟು ಸುಸಂಸ್ಕೃತಿಯ ಬದುಕನ್ನು ಬದುಕಿರಿ ಎಂಬುದೇ ಲೇಖಕರ ಚಿಂತನೆ.

## ೫. ಅರ್ಮುಗಂ ಪ್ರಸಾದ್‌ಗೆ ನಿದ್ದೆ ಬಾರದಿರಲಿ:

ಈ ಲೇಖನದಲ್ಲಿ ರಾಜಕೀಯ ಮೀಸಲಾತಿಯಲ್ಲಿ ನನ್ನ ಜನಾಂಗದಿಂದ ಆಯ್ಕೆಯಾದ ಹಾಗೆಯೇ ನನ್ನ ಜಾತಿಯ ಹೆಸರಿನ ಮೇಲೆ ಆಯ್ಕೆಯಾದ ಅಧಿಕಾರಿಗಳು ನನ್ನ ಜನಾಂಗದವರ ನೋವಿಗೆ ಸ್ಪಂದಿಸದ ಮೇಲೆ ಅವರು ರಾಜೀನಾಮೆ ನೀಡಿ ಮತ್ತೇ ಜೀತಕ್ಕೆ ಸೇರಿಕೊಳ್ಳಬೇಕು. ಶಾಸಕರು, ಮಂತ್ರಿಗಳು ಇವತ್ತು ವಿಲಾಸಿ ಜೀವನ ಮಾಡುತ್ತಾರೆ. ಆದರೆ ಅದೇ ಜನಾಂಗ ಕಣ್ಣೀರಿನಿಂದ ಬದುಕನ್ನು ಸಾಗಿಸುತ್ತಿದ್ದಾರೆ. ಹಳ್ಳಿ ಕಡೆ ಯಾರು ಗೆದ್ದರೇನೂ ಯಾರು ಸೋತರೇನು ನಮ್ಮ ಪಾಡು ನಮಗೆ ಇದ್ದೇ ಇದೆ ಎನ್ನುವ ನಿರುತ್ಸಾಹದ ಬದುಕು ಇದೆ. ಅನ್ಯಾಯಕ್ಕೊಳಗಾದವರು ನ್ಯಾಯ ಕೇಳಲು ನಮ್ಮ ರಾಜಕೀಯ ಮುಖಂಡರಾದ ಲೇಖಕರು, ಶ್ರೀನಿವಾಸ್ ಪ್ರಸಾದರ ಮನೆ ಮುಂದೆ ಧರಣಿ ನಡೆಸಿದಾಗ ಅವರನ್ನು ಹೊಡೆದೋಡಿಸಿದ ಪ್ರಸಂಗ ಮನಕರಗುವಂತಹ ಘಟನೆ ಅಂದರೆ ಇಂತಹ ಮಂತ್ರಿಗಳಿಗೆ ದಲಿತತ್ವದ ಬದುಕನ್ನು ನೆನಪಿಸುವುದಾಗಿದೆ. ನಿಜಕ್ಕೂ ಅವರಿಗೆ ಅವರ ತಪ್ಪಿನ ಅರಿವಾಗಬೇಕು. ಅಲ್ಲಿಯವರೆಗೆ ಅವರಿಗೆ ನಿದ್ದೆ ಬಾರದಿರಲಿ ಚಿಂತೆ ಕಾಡಲಿ. ನೊಂದನವರ ನೋವಿಗೆ ಸ್ಪಂದಿಸಲೆಂಬುದೇ ಇಲ್ಲಿನ ತಾತ್ಪರ್ಯವೆನಿಸಿದೆ.

## ೬. ಉದ್ಘಾಟನೆಯಾದ ಸಮಾರೂಪ:

ಲೇಖಕರು ಅರಳಾಳುಸಂದ್ರದ ಸಮತಾ ವಿದ್ಯಾಲಯದಲ್ಲಿ 'ಸಮಾಜವಾದದ ವಿಚಾರಧಾರೆ ಹಾಗೂ ಪ್ರಸುತತೆ' ಎಂಬ ಬಗ್ಗೆ ವಿಚಾರ ಸಂಕಿರಣ, ಲೇಖಕರು ತಡವಾಗಿ ಬಂದರು. ಅಷ್ಟೋತ್ತಿಗೆ ಶಿಬಿರಾರ್ಥಿಗಳು ಒಬ್ಬರಿಗೊಬ್ಬರು ಹೊಡೆದಾಡಿಕೊಂಡು ಗಂಟು ಮೂಟೆ ಕಟ್ಟಿದ್ದರು.

ದೇವನೂರರು ಏನ್ರಪ್ಪಾ ಅಪರೂಪಕ್ಕೆ ಸಮಾರೋಪಕ್ಕೆ ಬಂದರೆ ಈಗಾಯಿತಲ್ಲ ಎಂದಾಗ ಏನೋ ಬಂದಿದ್ದರಲ್ಲ. ಮಾತಾಡಿ ಎಂದಾಗ ಅವರು ಎಲ್ಲರನ್ನು ಒಂದುಗೂಡಿಸುವ ರೀತಿಯಲ್ಲಿ ಈ ರೀತಿ ಹೇಳುತ್ತಾರೆ. ಗಾಂಧಿ ಕಾಠಿಣ್ಯದ ತಂದೆಯಂತೆ, ಜೆ.ಪಿ.ಅಸಹಾಯಕ ತಾಯಿ, ವಿನೋಬಾ ಮದುವೆಯಾಗದ ವ್ರತನಿಷ್ಟ ಅಕ್ಕನಂತೆ, ಲೋಹಿಯಾ ಊರೂರು ಅಲೆಯುವ ಮನೆ ಸೇರದ ಅಲೆಮಾರಿಯ ಮಗ, ಅಂಬೇಡ್ಕರ್ ತಾರತಮ್ಯಕ್ಕೆ ಒಳಗಾಗಿ ಮನೆ ಹೊರಗೆ ಇರುವ ಮಗ ಇದು ನಮ್ಮ ಕುಟುಂಬ. ನಾವು ಇಲ್ಲಿನ ಸಂತಾನ. ಇದನ್ನು ಹೀಗಲ್ಲದೇ ಹೇಗೆ ನೋಡಬೇಕು. ಈಗ ನಾವು ಏನು ಮಾಡಬೇಕು ಎಂದಾಗ ಸಭೆ ಮುಗಿಯಲಿಲ್ಲ ಸಭೆ ಪ್ರಾರಂಭವಾಯಿತು. ಇದರಿಂದ ಎಲ್ಲರನ್ನೂ ಒಂದುಗೂಡಿಸುವ ಕಲೆಯೆಂದರೆ ಸಮಾರಂಭದಲ್ಲಿನ ಭಾಷಣಗಳು ಆದರೆ, ಇವತ್ತಿನ ಭಾಷಣಗಳೂ ಕೇವಲ ಒಂದು ಕೋಮಿನ ಜನಾಂಗದ್ದಾಗಿವೆ. ಇದರಿಂದ ಐಕ್ಯತೆ ಇನ್ನೂ ಸಾಧ್ಯವಾಗಿಲ್ಲ.

## ೭. ದೇಶ ಭಕ್ತಿಯಲ್ಲಿ ನನ್ನ ಕಾಡುತ್ತಿರುವ ಶಂಕೆ:

ದಸಂಸ ರಾಜ್ಯದ ಸಂಚಾಲಕರಾಗಿದ್ದ ಪ್ರಸಂಗದಲ್ಲಿ ಜಿಲ್ಲಾ ಸಂಚಾಲಕರು ಸಂಘದ ಹಣ ದುರಪಯೋಗ ಮಾಡಿಕೊಂಡಾಗ ಅವರಿಂದ ಹಣ ವಸೂಲಿ ಮಾಡಿ ಶಿಕ್ಷೆ ಕಡಿಮೆ ಮಾಡಿಸಿದ್ದರಿಂದ ಅವರು ಕೊನೆಗೆ ದೇವನೂರ ಮಹಾದೇವ ಭ್ರಷ್ಟಾಚಾರಿ ಎಂದು ದೂರಿದ್ದರು. ಇದು ಪ್ರಮೋದ್ ಮಹಾಜನ್ ಎನ್ನುವ ವ್ಯಕ್ತಿಗೆ ಉದಾ: ಆತ ಕಾರ್ಗಿಲ್ ಯುದ್ಧಕ್ಕೆ ಕಾರಣವಾಗುವ ಹಾಗೂ ಮಧ್ಯಂತರ ಚುನಾವಣೆ ಕಾರಣ ಎನ್ನುವಂತೆ ತಾನೇ ಇತರನ್ನು ದೇಶದ್ರೋಹಿ ಎಂದು ಹೇಳಿಕೆ ನೀಡಿದ್ದಾರೆ.

ಭಾರತ ಜಾತಿ ಮತಾಂಧತೆಗಳಿಂದ ಜರ್ಜರಿತವಾಗಿದೆ. ಆದರಿಂದ ನಮ್ಮಲ್ಲಿನ ನಮ್ಮತನದ ದೇಶಭಕ್ತಿಯ ಅರಿವೂ ಅಗತ್ಯವಾಗಬೇಕಿದೆ. ನಮ್ಮಲ್ಲಿನ ದೇಶಭಕ್ತಿ ಕೇವಲ ಸ್ವಾರ್ಥವಾದದ್ದೇ ವಿನಹಃ ವಿಶಾಲ ಮನೋಭಾವದ್ದಲ್ಲ. 'ದೇಶ ನನಗೆ ಏನು ಕೊಟ್ಟಿತು ಎನ್ನುವುದಕ್ಕಿಂತ, ದೇಶಕ್ಕೆ ನಾನೇನು ಕೊಟ್ಟೇ' ಎಂಬ ದೇಶಭಕ್ತಿಯನ್ನು ಬೆಳಸಿಕೊಳ್ಳಬೇಕು. ಜೊತೆಗೆ ಈ ಕೊಡುಗೆ ಸೇವೆ 'ನನಗಾಗಿ ಅಲ್ಲ, ಅದು ನಿಮಗಾಗಿ' ಎನ್ನುವಂತಿರಬೇಕು.

## ೮. ಇಂಗದ ದಾಹದ ಇತ್ತೀಚಿನ ರಾಜಕೀಯ:

ದೇವನೂರರ ಈ ಲೇಖನ ಬಹಳ ವೈಚಾರಿಕವಾಗಿದೆ. ಎಲ್ಲೋ ಒಂದು ಕಡೆ ಜೆ.ಡಿ.ಎಸ್.ನ ದೇವಗೌಡ್ರು ಹಾಗೂ ಕುಮಾರಸ್ವಾಮಿಯ ವ್ಯಕ್ತಿತ್ವಕ್ಕೆ ಮಸಿ ಬಳಸಿಕೊಂಡ ವಿಚಾರವನ್ನು ತಿಳಿಸುತ್ತಾ ಕರ್ನಾಟಕದ ರಾಜಕಾರಣದಲ್ಲಿ ಆಪರೇಷನ್ ಪಕ್ಷಗಳು, ಶಾಸಕರೆಂಬ ನಿರ್ಣಯದಿಂದ ಜೆ.ಡಿ.ಎಸ್. ಕಾಂಗ್ರೇಸ್‌ನೊಂದಿಗೆ ಮೈತ್ರಿ ಮಾಡಿಕೊಂಡು ಅಧಿಕಾರ ಅನುಭವಿಸಿ ಏಕಾಏಕಿ ಜೆ.ಡಿ.ಎಸ್. ಬಿಜೆಪಿ ಜೊತೆಗೂಡಿ ೨೦ ತಿಂಗಳು ಕಾಲ ಆಳ್ವಿಕೆ ಮಾಡಿ ಕೊನೆಗೆ ಬಿಜೆಪಿಗೆ ಕೈಕೊಟ್ಟಿತು. ಇದರಿಂದ ಇವುಗಳ ಒಳ ಸಂಘರ್ಷ ಮುಂದೊಂದು ದಿನ ಬಿಜೆಪಿ ಅಧಿಕಾರ ಹಿಡಿಯುವ ಮಟ್ಟಿಗೆ ಬೆಳೆದು ನಿಂತಿತು. ಆದರೆ ಇಂಗದ ದಾಹದ ರಾಜಕೀಯದಿಂದ ಬಿ.ಜೆ.ಪಿ. ಆಡಳಿತಕ್ಕೆ ಬಂದು ನುಂಗಿ ನೀರು ಕುಡಿದರು. ಮಾನ್ಯ ಶಾಸಕರು, ಮಂತ್ರಿಗಳು, ಜೈಲು ಸೆರವಾಸೆ ಅನುಭವಿಸಿದರು. ಇದು ಭ್ರಷ್ಟರಿಗೊಂದು ಪಾಠ. ಆದರೂ ಇಂದಿನ ರಾಜಕೀಯ ವ್ಯಕ್ತಿಗಳೀಗೆ ರಾಜಕೀಯ ಆಶೆ ಪೂರೈಸಲು ಸಾಧ್ಯವಿಲ್ಲ. ಪುನಃ ಅವರನ್ನೇ ಚುನಾವಣೆಗಳಲ್ಲಿ ಆಯ್ಕೆ ಮಾಡುತ್ತಾರೆ.

## ೯. ಜೈ ಆಹಿಂದ್:

ಈ ಲೇಖನ ಮೂಲತಹ ಜೆ.ಡಿ.ಎಸ್. ಕುಟುಂಬ ರಾಜಕಾರಣ ವಿರೋಧಿಸಿ ಸಿದ್ದರಾಮಯ್ಯ ಎಚ್.ಸಿ.ಮಹದೇವಪ್ಪ ಹಾಗೂ ಜಾರಕಿಹೊಳಿ ಪಕ್ಷದಿಂದ ಉಚ್ಚಾಟಿಸಿ ಕೊನೆಗೆ ಹೊರಬಂದು ದೇವಗೌಡರ ಮನೆಯ ವಿರುದ್ದ ಜೈ ಅಹಿಂದ ಎಂಬ ಪಕ್ಷಾತೀತವಾದ ಹೋರಾಟ ಆರಂಭಿಸಿದರೂ ಇದು ಶೋಷಿತ ಜನ ಸಮುದಾಯದ ಅಂತಃಕರಣವಾಗಿತ್ತು. ಒಂದು ರೀತಿಯಲ್ಲಿ ೧೨ನೇ ಶತಮಾನದ ಬಸವಣ್ಣನವರು ವಚನ ಸಾಹಿತ್ಯದ ಕ್ರಾಂತಿಯನ್ನು ತೋರುವಂತೆ ಸಾಮಾಜಿಕ ನ್ಯಾಯವನ್ನು ಎತ್ತಿಹಿಡಿಯುವ ಹಾಗೆ, ಸಮಾನತೆ, ಉದಾರತೆ, ಸಹೋದರತೆಯ ಮನೋಭಾವನೆಯನ್ನು ಬೆಳಸುವಂತಿದೆ.

ಒಟ್ಟಾರೆ ಗುಲಾಮರಾಗಿ, ರಬ್ಬರ್ ಸ್ಟಾಂಪ್ ಆಗಿ, ಜಾತಿ, ನೈತಿಕತೆಯನ್ನು ಮಾರಿಕೊಳ್ಳುವ ರಾಜಕಾರಣಿಗಳಿಗೆ ಈ ಆಹಿಂದ್ ಒಂದು ಪರಿಪಾಟವೆಸಿಸಿದೆ.

## ೧೦. ಬೇಕಿದೆ ಒಂದು ರಥಯಾತ್ರೆ:

ಇದರಲ್ಲಿ ಬಂಡವಾಳಶಾಹಿಗಳ ಕಪಿಮುಷ್ಟಿಯಲ್ಲಿ ರಾಜಕಾರಣಿಗಳು ಕೈಗೊಂಬೆ ಯಾಗಿದ್ದಾರೆ. ಏಕೆಂದರೆ ಚುನಾವಣೆಯಲ್ಲಿ ಹಣ ಚೆಲ್ಲುವ ಬಂಡವಾಳ ಶಾಹಿಗಳು ಮುಂದಾಗುತ್ತಾರೆ. ಗೆದ್ದ ಮೇಲೆ ಅವರು ಹೇಳಿದಂತೆ ಕೇಳುತ್ತಾರೆ. ಉದಾ : ನೈಸ್ ರಸ್ತೆಯ ಮಾಲೀಕ ಖೇಣಿ ಇಂದು ರೈತರಿಂದ ಕಡಿಮೆ ಬೆಲೆಗೆ ಭೂಮಿಕೊಂಡು ಇವತ್ತು ಅದೇ ರೈತರು ಹೊಲಕ್ಕೆ ಹೋಗಲು ಸುಂಕ ಕಟ್ಟಿ ಹೋಗಬೇಕಾದ ಪರಿಸ್ಥಿತಿ ಬಂದಿದೆ. ಅದರಿಂದ ಲೋಹಿಯ ಹೇಳುವಂತೆ ಸಮಾನತೆ, ಈ ಸಂಪತ್ತು, ಅಭಿವೃದ್ಧಿ ಇವು ಒಂದೇ ರಥದ ಎರಡು ಚಕ್ರಗಳು. ಆದರೆ ಇಂದು ಅಭಿವೃದ್ಧಿ ಎಂದರೆ ಸಮತೆ ಇಲ್ಲದ ರಥ ಚಕ್ರ ಒಂಟಿ ಚಕ್ರದಲ್ಲೇ ಯದ್ವಾತದ್ವಾ

ನಾಗಲೋಟದಲ್ಲಿ ಓಡುತ್ತಿದೆ. ಆದರಿಂದ ಗುರಿ ಸೇರಲು ಸಾಧ್ಯವಿಲ್ಲ. ಆದ್ದರಿಂದ ಎರಡೂ ಸಮನಾಗಿದ್ದಾಗ ಮಾತ್ರ ಅಭಿವೃದ್ಧಿ ಸಾಧ್ಯ.

## ೧೧. ಒಂದು ಪತ್ರಿಕಾಗೋಷ್ಠಿ

ಇಂದಿನ ರಾಜಕೀಯ ಪಕ್ಷಗಳು ಭೂ ಕಬಳಿಕೆಯ ಡಿನೋಟಿಫಿಕೇಷನ್ ಕೈಗಾರಿಕೆ, ವಿದ್ಯಾಸಂಸ್ಥೆ ಇತ್ಯಾದಿಗಳ ಲಾಬಿ ಜೊತೆಗೆ ಚುನಾವಣೆಗಳು ನಿರ್ಣಾಯಕವಾಗಿದೆ. ಏಕೆಂದರೆ ಪ್ರಭುತ್ವ ಜನರ ಕೈಯಲ್ಲಿರಬೇಕು. ಅಥವಾ ಮಾಫಿಯಗಳ ಕೈಲಿ ಇರಬೇಕೋ ಎಂಬುದು ಜಿಜ್ಞಾಸೆಯಾಗಿದೆ. ಸರ್ಕಾರಗಳಿಗೆ ಮಾಫಿಯಗಳ ಕತ್ತಿ ವಿಧಾನಸೌಧದ ತಲೆಮೇಲೆ ತೂಗಾಡುತ್ತಿವೆ. ಈಗಾಗಲೇ ಇಡೀ ದೇಶದಲ್ಲಿ ಮಾಫಿಯಾಗಳ ಕೈಯಲ್ಲಿ ಕ್ರಿಕೆಟ್ ಆಟಗಾರರಿದ್ದಾರೆ. ಆದರಂತೆ ನಾಳೇ ಇಡೀ ನಾಡು, ಸಂಪತ್ತು, ರಾಜಕೀಯ ಪಕ್ಷಗಳು, ಎಲ್ಲವೂ ಖಾಸಗಿ ಒಡೆತನದ ಕಪಿಮುಷ್ಠಿಯಲ್ಲಿರುತ್ತವೆ. ಮನುಷ್ಯನ ನೈತಿಕತೆ, ಹಕ್ಕು, ಬದುಕಿಗೆ ಬೆಲೆ ಇಲ್ಲದಂತಾಗಿ ಎಲ್ಲವೂ ಖಾಸಗೀಮಯವಾಗುತ್ತಿದೆ.

## ೧೨. ಆಕಾಶದಲ್ಲಿ ರಣಹದ್ದುಗಳು

ಇಡೀ ಜಗತ್ತಿನ ರಾಜಕೀಯ ವಿದ್ಯಮಾನ ನೋಡುವಾಗ ನಮಗೆ ಅರ್ಥವಾಗುವುದು. ಅಮೇರಿಕಾದ ದೊಡ್ಡಣ್ಣನ ಮೇಲೆ ಇರಾಕ್ ನಂತಹ ರಾಷ್ಟ್ರ. ಪೆಂಟಗಾನ್ ಕಟ್ಟಡ ಬಾಂಬು ಹಾಕಿದ್ದು ಜಗತ್ಪ್ರಸಿದ್ಧಯಾದರು ಇಂದು ಅದನ್ನು ಸೆದೆ ಬಡಿಯಲು ರಷ್ಯಾ ಅಮೇರಿಕಾ ಒಟ್ಟುಗೂಡಿವೆ. ಜೊತೆಗೆ ವಿಶ್ವಸಂಸ್ಥೆ ಮುಂದಾಗಿದೆ. ಇದು ಒಂದು ರೀತಿಯಲ್ಲಿ ಮನುಷ್ಯ ಮನುಷ್ಯನನ್ನು ತಿನ್ನುವಂತಹ ರಣಹದ್ದುಗಳಾಗಿದೆ.

ಬಲಿಷ್ಠ ರಾಷ್ಟ್ರಗಳು ಗೂಂಡಾಗಳಂತೆ ವರ್ತಿಸುತ್ತಿವೆ. ಇಲ್ಲಿ ಜನಾಭಿಪ್ರಾಯವೂ ಲೆಕ್ಕಕ್ಕೆ ಇಲ್ಲ ಎಲ್ಲಿಗಾದರೂ ನುಗ್ಗಿ ದೋಚುತ್ತೇವೆ. ನಾವು ಬಲಿಷ್ಠರು ನಾವು ಹೇಳಿದ್ದೇ ನ್ಯಾಯ ನಡೆದದ್ದೇ ದಾರಿ. ಈ ಅರ್ಥವೂ ಬಂದಿದೆ. ಒಟ್ಟಾರೆ ಮನುಷ್ಯ ರಣಹದ್ದುಗಳಂತೆ ವರ್ತಿಸುತ್ತಿದ್ದಾನೆ.

## ೧೩. ಅರಸು ಚಕ್ರವರ್ತಿಯಂತೆ

ಅರಸರು ಕುಂಬಾರರ ಜಾತಿಗೆ ಸೇರಿದವರಂತೆಯೆ ಕೃಷ್ಣದೇವರಾಯ ಆಗಸರಂತೆ, ಚಂದ್ರಗುಪ್ತ ಮೌರ್ಯ, ಅಶೋಕ ಸಾಮಾನ್ಯ ವರ್ಗಕ್ಕೆ ಸೇರಿದವರಂತೆ. ಅದರ ಜೊತೆಗೆ ರಾಮಾಯಣದಲ್ಲಿನ ಹನುಮಂತ. ಶಯ್ಯಾಗೃಹದಲ್ಲಿ ಮಂಡೋದರಿಯೊಡನೆ ಮಲಗಿದ್ದ ರಾವಣನ ಕಂಡು, ಸೀತಾಪರಹಣದ ಕಳಂಕ ಬರದಿದ್ದರೆ ರಾವಣ ದೇವರಿಗೆ ಅರ್ಪಿಸಬೇಕಾದ ಹಾರ ಎಂಥ ಮಹಾತ್ಮ" ಎಂದಿದ್ದಾರೆ. ಈ ನುಡಿಗಳು ದೇವರಾಜು ಅರಸುರವರು ಭ್ರಷ್ಟಾಚಾರದ ಕಳಂಕ ಇಲ್ಲದಿದ್ದರೆ ದೇವರಿಗೆ ಅರ್ಪಿಸುವ ಹಾರದಂತೆ ಎಂದು "ಚದುರಂಗರವರು' ಹೇಳಿದ್ದಾರೆ.

೧೪. ಎಂ.ಡಿ.ಎನ್.ಸಂದರ್ಶನ

ಪ್ರೋ.ಎಂ.ಡಿ.ನಂಜುಂಡಸ್ವಾಮಿಯವರು ಪಿ.ಯು.ಸಿ.ಫೇಲಾದ ದೇವನೂರು ಮಹಾದೇವರನ್ನು ಸಮಾನವಾಗಿ ಕಂಡವರು ಸಿಗರೇಟು ಸೇದಲು ಸಹಾಯ ಮಾಡಿದವರು. ಜೊತೆಗೆ ತಮ್ಮ ಒಡನಾಡಯಂತೆ ರೈತ ಸಂಘ, ದಲಿತ ಸಂಘಗಳು, ಒಟ್ಟಿಗೆ ಸೇರಿದರೆ ಸರ್ಕಾರಗಳಿಂದ ಸೌಲಭ್ಯ ಪಡೆಯಬಹುದು. ಒಟ್ಟಿಗೆ ಸಂಘಶೋಷಣೆಗಳನ್ನು ಕಷ್ಟಗಳನ್ನು ಪರಿಹರಿಸಿಕೊಳ್ಳಬಹುದು.

ರೈತ ಸಂಘದಲ್ಲಿ ಲಿಂಗಾಯಿತರು ಒಕ್ಕಲಿಗರು ಎಲ್ಲ ಇದ್ದಾರೆ. ಆದರೆ ಅಸ್ಪಶ್ಯರನ್ನು ದೂರವಿಡುತ್ತಾರೆ. ಆದರಿಂದ ಜೊತೆಗೆ ಸೇರಲು ಸಾಧ್ಯವಿಲ್ಲ. ಆದರೂ ರೈತಸಂಘದ ಪ್ರಣಾಳಿಕೆಯಲ್ಲಿ ಹೀಗಿದೆ. ಅಸ್ಪಶ್ಯತೆ ವಿರುದ್ಧವಾಗಿ ಜಾತೀಯತೆ ವಿರುದ್ಧವಾಗಿ ಸಹ ಭೋಜನ, ಊರಿಗೆ ಒಂದೇ ಬಾವಿ, ಅಂತರ್‌ಜಾತಿ ವಿವಾಹ, ಅಸ್ಪಶ್ಯನ ಮನೆಯಲ್ಲಿ ಉಂಡವನೇ ರೈತ ಸಂಘದಲ್ಲಿ ಓಟು ಹಕ್ಕುವುಳ್ಳವನು ಇತ್ಯಾದಿ ಕಾರ್ಯಕ್ರಮ ಮಾಡದಿದ್ದರೆ ಅಂತ ಸಂಘ ಏಕೆ ಬೇಕು. ಅಂಥ ಸಂಘ ಬ್ಯಾಡವೇ ಬ್ಯಾಡ ಎಂದೂ ಹೇಳುತ್ತಾ ಇಬ್ಬರಲ್ಲೂ ಸಮಾನತೆಯ ಮನೋಭಾವನೆ ಹಂಚಿಕೊಂಡರು.

**೧೫. ಎಂ.ಡಿ.ಎನ್.ಈಜು :** ಈ ಲೇಖನದಲ್ಲಿ ಖ್ಯಾತ ವಕೀಲರಾದ ರವಿವರ್ಮ ಕುಮಾರ ಒಮ್ಮೆ ಕಾರಿನಲ್ಲಿ ಹೋಗುತ್ತಿದ್ದಾಗ ಕರೆಯನ್ನು ಕಂಡೊಡನೆ ಈಜಲು ಹೋದರು. ಶ್ರೀ ನಂಜುಂಡಸ್ವಾಮಿಯವರು ನೋಡಿ ಈಜನ್ನು ಗಮನಿಸಿ. ಆ ಕೈ ಮುಂದೆ, ಹಾಗೆ ಈಗೆ ಎಂದು ಮಾರ್ಗದರ್ಶನ ಮಾಡಿದರು. ಇದಕ್ಕೆ ನೀವೂ ಬನ್ನಿ ಎಂದಾಗ ಈಜು ಬರಲ್ಲ ಎಂದರಂತೆ. ಆದರಂತೆ ಆಧುನಿಕತೆಯ ವಿದ್ಯೆ, ವೈಚಾರಿಕತೆ ಇಂದು ಏನ್ನನೋ ಓದದೇ ಎಲ್ಲವನ್ನು ಮೇಲಿನ ಗ್ರಹಿಕೆ ತೋರಿಕೆಯಂತೆ ನೀರಿಗೆ ಇಳಿಯದೆ ಈಜಿನಂತೆ ನಡೆಯುತ್ತಿದೆ. ಅದರಂತೆ ರಾಜಕೀಯವು ಎಲ್ಲ ರೀತಿಯ ಬದುಕನ್ನು ಕಲಿಸುತ್ತದೆ.

೧೫. ಮಣ್ಣು ಇಲ್ಲವಾದ ಕಾಡು ಗೋಳ್ಗರೆಯುತ್ತಿದೆ

ಈ ಲೇಖನಗಳಲ್ಲಿ ಪ್ರಮುಖವಾಗಿ ಭಾರತೀಯ ರಾಜಕೀಯ ಇತಿಹಾಸದಲ್ಲೇ ಒಬ್ಬ ಧೀಮಂತ ವ್ಯಕ್ತಿಯೆನಿಸಿದ ಲೋಹಿಯ ಅವರ ಬಗ್ಗೆ ಬರೆಯುವುದು ತುಂಬಾ ಕಷ್ಟವೆನಿಸುತ್ತದೆ. ಏಕೆಂದರೆ ರಾಜಕೀಯದಲ್ಲಿ ಯುಗ ಪ್ರವರ್ತಕ ಯುಗಪುರುಷರು ಬಂಡಾಯಗಾರರಾಗಿ ಇಂಡಿಯಾದ ಒಡಕುತನದ ವಿಷ ನುಂಗಿ ಸಮಾಜಕ್ಕೆ ಜೀವ ತುಂಬುವ ಸಾಕ್ಷತ್‌ದೇವ ಮಹಾದೇವನಂತೆ ಲೋಹಿಯ ಕಂಡು ಬರುತ್ತಾರೆ.

ಲೋಕಸಭೆಯಲ್ಲಿ ಜವಹರಲಾಲ್ ನೆಹರರೊಂದಿಗೆ ಆವೇಶಗೊಳ್ಳುವುದರೊಂದಿಗೆ ಸಮಾಜದಲ್ಲಿ ಕ್ರಾಂತಿಯನ್ನುಂಟು ಮಾಡುತ್ತಿದ್ದರು. ಅದರೂ ಸೋಷಲಿಸ್ಟ್ ಪಾರ್ಟಿಯಲ್ಲಿ ಒಬ್ಬ

ಸಂತರಂತೆ ಕಂಡರೂ ವಿಗ್ರಹ ಭಂಜಕ ಲೋಹಿಯ ಸದಾ ಒಂದು ವ್ಯಕ್ತಿಯಾಗಿರಲಿಲ್ಲ. ಒಂದು ಸಮಷ್ಟಿಯೇ ಅವರಾಗಿದ್ದರು.

ಡಾ.ಲೋಹಿಯವರು ಸಾಮಾಜಿಕ ಆರ್ಥಿಕ ಕ್ಷೇತ್ರಗಳಲ್ಲಿ ಚಳುವಳಿ ಮಾಡುತ್ತಿದ್ದಂತೆಯೇ ಭಾರತೀಯ ಭಾಷೆಗಳಲ್ಲಿಯೂ ಸಮಾನತೆ ತರಲು ಹೋರಾಡುತ್ತಿದ್ದರು. ಭಾರತೀಯರು ಅವರವರ ಭಾಷೆಗಳ ಬಗ್ಗೆ ಹೆಮ್ಮೆ ಪಡಬೇಕು. ಒಂದು ದೇಶ ನಿಲ್ಲುವುದು ಭಾಷೆಯ ಮೇಲೆಯೇ.

ಹೀಗೆಯೇ, ಲೋಹಿಯ ಖಠೋರವಾದಿಯಾಗಿದ್ದವರು. ಅವರ ಮರಣ ನಂತರ ಲೋಕಸಭೆಯಲ್ಲಿ ದುಃಖದ ಛಾಯೆ ಅವರಿಸಿತು. ನಮ್ಮ ನಡುವೆ ಅಗ್ನಿಪರ್ವತದಂತಿದ್ದವರು, ಹಾಗೆಯೇ ಹೊರಟು ಹೋದರು. ಅದರೂ ತಮ್ಮ ಹೆಜ್ಜೆ ಗುರುತುಗಳನ್ನು ಲೋಕಸಭೆಯಲ್ಲಿ ಬಿಟ್ಟಿದ್ದಾರೆ. ಅಲ್ಲಿ ಅವರ ಧ್ವನಿಯೂ ಪ್ರತಿನಿಧಿಸುತ್ತದೆ. ದೇವರನ್ನು ಮತ್ತು ನಾಯಕರನ್ನು ಶ್ರೀ ಸಾಮಾನ್ಯನ ಮಟ್ಟಕ್ಕೆ ತರಲು ಯತ್ನಿಸಿದವರೂ ಅವರೊಬ್ಬರೇ ರಾಜಕೀಯದಲ್ಲಿ ಒಬ್ಬ ಶ್ರೇಷ್ಠ ವ್ಯಕ್ತಿಯಾಗಿ ಪ್ರವೇಶಿದ್ದರು. ಇಂದಿನ ರಾಜಕೀಯಕ್ಕೆ ಲೋಹಿಯರವರ ಚಿಂತನೆ ಆದರ್ಶಗಳು ಮುಖ್ಯವಾಗುತ್ತವೆ. ಒಟ್ಟಿನಲ್ಲಿ ಲೋಹಿಯ ಅಜರಾಮರ ವಾದ ವ್ಯಕ್ತಿತ್ವ

**೧೬. ಗಾಂಧೀ ಅಂಬೇಡ್ಕರ್ ಒಂದಿಷ್ಟು ಮಾತು:**

ಪ್ರಸ್ತುತ ಲೇಖನದಲ್ಲಿ ಲೇಖಕರು ಗಾಂಧಿ ಅಂಬೇಡ್ಕರ್ ಇಬ್ಬರೂ ಒಂದೇ ಮನೆಯ ಅಪ್ಪ ಅಮ್ಮನಂತೆ, ಗಾಂಧೀಜಿ ಅಂಬೇಡ್ಕರ್ ನಿಲುವು ತರ್ಕಾತೀತವಾಗಿರುತ್ತಿತ್ತು.

ಗಾಂಧೀಜಿ – ತಮ್ಮ ಆತ್ಮಕಥೆಯ ಕೊನೆಯಲ್ಲಿ "ಒಂದು ಕಡೆ ಸಕಲಜೀವಿಗಳಲ್ಲೂ ದೇವರನ್ನೂ ಕಾಣುವ ನಮ್ರ ಪ್ರಯತ್ನ ತಮ್ಮ ಜೀವನ ಎಂಬರ್ಥದಲ್ಲಿ ಹೇಳಿಕೊಂಡಿದ್ದಾರೆ. ಈ ನುಡಿಗೆ ಪ್ರಜ್ಞಾಪೂರ್ವಕವಾಗಿ ನಡೆಯುತ್ತ ಮುಂದಿಡುವ ಪ್ರತಿ ಹೆಜ್ಜೆಗಳನ್ನು ಪರೀಕ್ಷಿಸಿಕೊಳ್ಳುತ್ತ ನೆಡೆವರಂತೆ ಗಾಂಧಿ ಕಾಣಿಸುತ್ತಾರೆ.

ಅದರಂತೆಯೇ, ಅಂಬೇಡ್ಕರ್ ಸಾಮಾಜಿಕ ಸಮಾನತೆಗಾಗಿ, ಹಿಂದೂ ಧರ್ಮ ತ್ಯಜಿಸಿ, ಬೌದ್ಧಧರ್ಮವನ್ನು ಸೇರುತ್ತಾರೆ. ಬುದ್ಧ, ಬಸವಣ್ಣ, ಅಲ್ಲಮರು ತಮ್ಮ ಶತ್ರು ಒಳಗೂ ಇದ್ದಾನೆಂದು ಹೆಣಗುತ್ತಿದ್ದರು. ಆಸೆ, ದ್ವೇಷ, ಆಸೂಯೆ ನಾನತ್ವ ಇಂಥವ ತಮ್ಮ ಒಳಗಿನ ಶತ್ರು ಎಂದು ಭಾವಿಸುತ್ತಿದ್ದರು. ಆದರೆ ಸಮಾನತೆಗೆ ಹೋರಾಡುವ ಸಂಘಟನೆಗಳು ಶತ್ರು ಹೊರಗೆ ಇದ್ದಾನೆಂದು ಹೋರಾಡುತ್ತೇವೆ. ಇಂದಿನ ಭ್ರಷ್ಟಾಚಾರ ವಿರೋಧಿಯೇ ನಾಳಿನ ಭ್ರಷ್ಟಾನಾಗುತ್ತಾನೆ. ನಾವು ಇಂದು ಯಾವುದನ್ನು ವಿರೋಧಿಸುತ್ತೇವಯೋ ನಾಳೆ ನಾವು ಅದೇ ಆಗಬಹುದಾದರೆ ಮಾಡಿದ್ದಾದರೂ ಏನು? ಆದರಿಂದ ಗಾಂಧಿ, ಅಂಬೇಡ್ಕರ್ ಮಹಾನ್ ಚಿಂತಕರು ಇಬ್ಬರ ಉದ್ದೇಶ ಒಂದೇ, ಸಮಾಜದಲ್ಲಿ ಸಮಾನತೆ, ಅಸ್ಪೃಶ್ಯತೆ ನಿವಾರಣೆ ಮಾಡುವುದು.

## ೧೭. ಸರ್ವೋದಯ ಕರ್ನಾಟಕ ಹೊಸ ರಾಜಕೀಯದತ್ತ ಅಂಬೆಗಾಲು:

ಸಮಾಜವಾದಿ ಪಕ್ಷದ ಅಧ್ಯಕ್ಷರಾಗಿ – ಅಂಬೇಡ್ಕರ್ ಕಾರ್ಯದರ್ಶಿಯಾಗಿ ಲೋಹಿಯ ಕಾರ್ಯ ನಿರ್ವಹಿಸಿದರು. ಆದರೆ ಮುಂದೆ ಅಂಬೇಡ್ಕರ್ ತೀರಿ ಹೋದ ಮೇಲೆ ಯಾರು ಮುಂದೆ ಬರಲಿಲ್ಲ. "ಸಮಾಜವಾದಿ ಅಂದೋಲನ ಕಣ್ಮರೆಯಾದ ನಂತರ ಪ್ರೋ. ಎಂ.ಡಿ.ನಂಜುಂಡಸ್ವಾಮಿ, ಎನ್.ಡಿ.ಸುಂದರೇಶ್, ಕಡಿದಾಳ ಶಾಮಣ್ಣ ಮುಂತಾದವರೆಲ್ಲ ರೈತ ಸಂಘವನ್ನು ರೂಪಿಸಿದ್ದಾರೆ. ಬಿ.ಕೃಷ್ಣಪ್ಪ, ದೇವನೂರು ಮಹಾದೇವ ಮುಂತಾದವರೆಲ್ಲ ದಲಿತ ಸಂಘರ್ಷ ಸಮಿತಿ ರಚಿಸಿದರು". ಹೀಗಿಯೇ ದಲಿತ ಸಂಘರ್ಷ ಸಮಿತಿ, ರೈತ ಸಂಘ ಒಟ್ಟಾಗಿ ಸೇರಿ ಒಂದು ರಾಜಕೀಯ ಪಕ್ಷ ರೂಪಿಸಲು ಮುಂದಾದಾಗ ಇಡೀ ಭಾರತವೇ ಕರ್ನಾಟಕದ ಕಡೆಗೆ ನೋಡುವಂತಾಯಿತು. ಪ್ರೋ.ಎಂ.ಡಿ.ನಂಜುಂಡಸ್ವಾಮಿಯವರು ಬಿ.ಕೃಷ್ಣಪ್ಪ, ಪಿ.ಲಂಕೇಶ ಒಟ್ಟುಗೂಡಿ ರಾಜಕೀಯ ಮಾಡುವ ಪ್ರಯತ್ನ ನಡೆಯಿತು. ಹೀಗೆಯೇ ನಾವೆಲ್ಲ ಒಟ್ಟುಗೂಡದಿದ್ದರೆ ನಾವು ರಾಜಕಾರಣವನ್ನೇ ಮಾಡಲಾಗದು ಎಂಬ ತಿಳುವಳಿಕೆ ಮೂಡಿತು. ಇತ್ತೀಚೆಗೆ ಕರುನಾಡು ಸೇನೆಯೂ ಸೇರಿ ವೇಗವರ್ಧಕದಂತೆ ರಾಜಕೀಯ ಚಟುವಟಿಕೆ ಶುರು ಮಾಡಿವೆ. ರಾಜಕೀಯ ಕ್ಷೇತ್ರದಲ್ಲಿ ಸೋತರು ಗೆದ್ದರು ಠೇವಣಿ ಕಳೆದುಕೊಂಡರು. ಅಖಾಡದಿಂದ ದೂರ ಸರಿಯದೇ ಅಲ್ಲೇ ಪ್ರಯತ್ನ ಪಡುವ ನಿರಂತರತೆಯೇ ರಾಜಕಾರಣದ ಮೊದಲ ಪಾಠ. ಇದರೊಂದಿಗೆ ಸಹಮನಸ್ಕ ಪಕ್ಷವಾದ ಬಿ.ಎಸ್.ಪಿ.ಯು. ಗೆಲ್ಲುವ ಕಡೆ ನಮ್ಮಿಂದ ತೊಡಕಾಗದಂತೆ ಸೂಕ್ಷ್ಮವಾಗಿ ರಾಜಕೀಯ ನಿರ್ವಹಿಸುವುದು ಮುಖ್ಯ. ಏಕೆಂದರೆ ಸಹೋದರರಾದ ನಾವು ದಾಯಾದಿಭಾವದಿಂದ ಛಿದ್ರರಾಗಿದ್ದೇವೆ. ನಮ್ಮ ಅಸಹಾಯಕ ಪರಿಸ್ಥಿತಿಯಲ್ಲಿ ಸಹೋದರಿಗೆ ಸಹೋದರಂತೆ ನಡೆದುಕೊಳ್ಳದಿದ್ದರೆ ನಮಗೆ ಉಳಿಗಾಲವೆಲ್ಲಿ? ಇಂತಹ ಸಂದರ್ಭದಲ್ಲಿ ಡಿ.ಆರ್.ನಾಗರಾಜು ಇಲ್ಲದ ಕೊರತೆ ಕಾಣುತ್ತಿದೆ. ಆದರೂ ಕಡಿದಾಳು ಶಾಮಣ್ಣ ಅವರ ದಾರ್ಶನಿಕತೆ ನಮ್ಮನ್ನು ಕೈಹಿಡಿದು ಕರೆದ್ಯೊಯುತ್ತಿದೆ. ಗ್ರಾಮ ಪಂಚಾಯಿತ್ತಿನಲ್ಲಿನ ಸದಸ್ಯರಿಗೆ ತರಬೇತಿ ನೀಡುವಾಗ, ಗಾಂಧೀಜಿ, ಅಂಬೇಡ್ಕರ್‌ರಂತಹ ಉದಾ : ಕೊಟ್ಟರೆ ಅವರು ಕುಳಿತಲ್ಲೇ ಕೈ ಮುಗಿದು ಇದು ನಮ್ಮಿಂದ ಸಾಧ್ಯವಾಗುವುದಿಲ್ಲ ಎಂದು ಕೈ ಮುಗಿದು ಸುಮ್ಮನಾಗುತ್ತಿದ್ದರಂತೆ. ಇಂತಹ ಸದಸ್ಯರ ಹೃದಯದಲ್ಲಿ ಒಳಗೆ ಅಡಗಿರುವ ಪುಟ್ಟ ಬುದ್ಧ, ಬಸವಣ್ಣ, ಗಾಂಧಿ, ಅಂಬೇಡ್ಕರ್ ಅವರನ್ನು ಹುಡುಕಿ ಹುಡುಕಿ ಉದ್ದೀಪನಗೊಳಿಸಬೇಕಾಗಿದೆ. ಅವರಿಗೆ "ನನ್ನ ಊರಿಗೆ ನನ್ನ ಕೈಲಾದಷ್ಟು" ಎಂಬ ಕಾರ್ಯಕ್ರಮದಿಂದ ಊರಿನ ಅಭಿಮಾನ ಬೆಳಸಿ ಪಟ್ಟಣದಲ್ಲಿ ನೆಲೆಸಿರುವ ಉದ್ಯೋಗಿಗಳು ನೆರವು ನೀಡುತ್ತಾರೆ. ಇದರೊಂದಿಗೆ ಹೃದಯವಂತರನ್ನು ಹುಡುಕಿ ಅಂಥವರ ಕೈಗೆ ಅಧಿಕಾರ ಸಿಗುವಂತೆ ಮಾಡುವುದಕ್ಕಾಗಿ ಸರ್ವೋದಯ ಪಕ್ಷದ ಹೆಜ್ಜೆಗಳಾಗಿದೆ. ಈ ಆಶೆಯಿಂದ ದೇವನೂರ ಮಹಾದೇವ ಪಕ್ಷದ ಅಧ್ಯಕ್ಷರಾಗಿ ಕಾರ್ಯ ನಿರ್ವಹಿಸುತ್ತಿದ್ದಾರೆ. ಸರ್ವೋದಯ ಪಕ್ಷದಲ್ಲಿ ತಳಮಟ್ಟದ ಸಮುದಾಯಗಳಲ್ಲಿ ಹತ್ತು ಜನರ ಸಮಿತಿ ರಚಿಸಿ ತಳಪಾಯ ಕಟ್ಟುತ್ತಾ ರಚನಾತ್ಮಕವಾದ ಕೆಲಸದೊಡನೆ ಚುನಾವಣ ರಾಜಕೀಯ ಮಾಡಬೇಕಾಗಿದೆ. ಇಂದೂ ರಾಜಕೀಯ ಎಂದರೆ ಕೆಸರು ಎರಚಾಟ ಆದರೆ ನಾವು ಪ್ರೀತಿ ಸಹನೆಯಿಂದ ನಾಡು ಕಟ್ಟುವ ವ್ಯಕ್ತಿಯನ್ನು ಗುರುತಿಸಿ ಅಂಥವರ ಕೈಗೆ ಅಧಿಕಾರ ಸಿಗುವಂತೆ ಮಾಡುವುದಕ್ಕಾಗಿ ಈ ಮೇಲಿನ ಕಾರ್ಯಕ್ರಮ ವ್ಯಾಪಕಗೊಳಿಸುವುದು. ಸರ್ವೋದಯ ಕರ್ನಾಟಕ ಪಕ್ಷದ ಹೆಜ್ಜೆಗಳಾಗಿವೆ.

ಆದ್ದರಿಂದ, ದಲಿತರು ಸೀಮಿತವಾದ ರಾಜಕೀಯ ಪ್ರಕ್ರಿಯೆಗೆ ಜೋತು ಬೀಳದಂತೆ ಮಾಡುತ್ತದೆ. ದೇಶದಾದ್ಯಂತ ಇರುವ ಸರ್ಕಾರಿ ಕಛೇರಿಗಳಲ್ಲಿ, ನಿತ್ಯವೂ ದಲಿತರು ತಮ್ಮ ರಾಜಕೀಯ ಅಧಿಕಾರವನ್ನು ಸೀಮಿತವಾಗಿ ಬಳಸುವಂತಾಗುತ್ತದೆ. ಇಂತಹ ಸಣ್ಣ ರಾಜಕೀಯ ಪ್ರಕ್ರಿಯೆಯಿಂದಾಗಿ ಒಟ್ಟಾರೆ ರಾಷ್ಟ್ರ ರಾಜಕೀಯದಲ್ಲಿ ಯಾವ ಪರಿಣಾಮ ಬೀರಲೂ ಆಗದು. ಅಂಬೇಡ್ಕರ್ ಅವರ ವಿಮೋಚನಾ ದೃಷ್ಟಿಕೋನದ ರಾಜಕೀಯದಿಂದಾಗಿ ದೂರವಾಗಿ ಉಳಿಯುವ ತನಕ ರಾಷ್ಟ್ರಮಟ್ಟದಲ್ಲಿ ಪ್ರಬಲಸ್ಥಾನ ಗಳಿಸಿಕೊಳ್ಳಲು ದಲಿತ ರಾಜಕೀಯಕ್ಕೆ ಸಾಧ್ಯವಾಗುವುದಿಲ್ಲ.

# ಅಧ್ಯಾಯ ೩.೩

## ಸಾಂಸ್ಕೃತಿಕತೆ

ಮಾನವ ಬದುಕಿನ ವಿಧಾನವೇ ಸಂಸ್ಕೃತಿ ಎನ್ನಿಸಿದೆ. ಇದರಲ್ಲಿನ ಆಚರಣೆಗಳು, ಕ್ರಮಗಳು, ಪ್ರಮುಖ ಪಾತ್ರ ವಹಿಸುತ್ತವೆ. ಆಚಾರ, ವಿಚಾರಗಳು ಒಂದು ಸಮಾಜದ ಪ್ರತಿನಿಧಿತ್ವವಾಗುತ್ತವೆ. ಆದರಿಂದ ಅಧ್ಯಯನದ ಅನುಕೂಲಕ್ಕಾಗಿ ಸಾಂಸ್ಕೃತಿಕತೆಯು ವಿಷಯವನ್ನು ಪರಿಚಯಿಸುವುದು ಅಗತ್ಯವಾಗಿದೆ.

**೧. ಹೆಣ್ಣು ಜಾತಿ ಮತ್ತು ದಲಿತ ಜಾತಿ:**

ಈ ಲೇಖನದಲ್ಲಿ ಹೆಣ್ಣು ಪರಂಪರೆಯಿಂದ ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ಶೋಷಣೆಗೆ ಒಳಗಾಗುತ್ತ ಬಂದವಳು. ಅವಳು ಪತಿದೈವೋಭವ ಎನ್ನುವ ನೆಲೆಯಲ್ಲಿ ಬದುಕಿ ಬಾಳಿ ಗಂಡನ ಗುಲಾಮಳು ಆಗಿರುವುದು ಹೆಣ್ಣಿನ ಶೋಷಣೆ ಎನಿಸಿದೆ. ಅದರಂತೆ ದಲಿತರನ್ನು ಶೋಷಣೆ ಮಾಡುವುದು ಪರಂಪರೆಯಿಂದ ನಡೆದು ಬಂದಿದೆ. ಆದರಿಂದ ಎರಡು ಕೋಮಿನಲ್ಲಿ ಶೋಷಣೆ, ಆಸಹನೆ, ತಲೆತಲಾಂತರದಿಂದ ಇದೆ. ಅದರಿಂದ ಎರಡೂ ಸಂಘಟನೆಗಳು ಒಟ್ಟುಗೂಡಿದ್ದಾಗ ಸಮಾಜಕ್ಕೆ ತಕ್ಕ ನೆಮ್ಮದಿಯ ಉತ್ತರ ಕೊಡಬಹುದು. ಈ ಲೇಖನದಲ್ಲಿ ಹುಡುಗಿ ಹುಡಗನಂತೆ ಪ್ಯಾಂಟ್ ಶರ್ಟು ಧರಿಸಿದ್ದಕ್ಕೆ ಇರುವ ಹುಡುಗರು ಹುಡುಗಿಗೆ ಧಿಮಾಕು ಎನ್ನುತ್ತಾರೆ. ಮುಂದೆ ಅಸ್ಪೃಶ್ಯನೆಂಬ ಹಾಡಿಗೆ ಹೀಗೆಯೇ ಮಾಡುತ್ತಾರೆ. ಆದರಿಂದ ಹೆಣ್ಣಿನ ಸಂಸ್ಕೃತಿ, ಉಡುಗೆ, ತೊಡುಗೆ, ಅಚಾರಗಳೇ ಮುಖ್ಯವೆನಿಸಿದೆ. ಮಹಿಳೆಯನ್ನು ಎಲ್ಲ ಕಾಲದಲಿ ನಿಯಂತ್ರಿಸಿದೆ ಅಂದಿನಿಂದ ಈವರೆಗೆ ಅವಳು ತನ್ನತನ ತನ್ನಿಂದ ಬೇರೆ ಎನಿಸಿದೆ. ಏಕೆಂದರೆ, ನಾಲ್ಕು ಗೋಡೆಗಳ ಮಧ್ಯೆ ಗುಲಾಮಳಾಗಿ, ಮಕ್ಕಳ ಹೆರುವ ಯಂತ್ರವಾಗಿದ್ದವಳು, ಇಂದು ಸಬಲೆಯಾಗಿ ತನ್ನ ಬದುಕನ್ನು ತಾನೇ ರೂಪಿಸಿಕೊಳ್ಳುತ್ತಾಳೆ, ದಲಿತರು–ಗುಲಾಮಗಿರಿಯಿಂದ ಮುಕ್ತಿಪಡೆದಿದ್ದಾರೆ.

ಗೋಹತ್ಯೆ ನಿಷೇಧ ಕಾಯಿದೆಯೊಳಗೆ ಬದುಕಿನ ಸಂಸ್ಕೃತಿ ಎಂದರೆ ಆಹಾರದ ವಿಧಾನ ಇದರಲ್ಲಿ ಪರಂಪರೆಯಿಂದ ಮಂಸಾಹಾರ, ಸಸ್ಯಹಾರಗಳೆಂಬ ೨ ವಿಧವಿದೆ. ಪೂರ್ವದಲ್ಲಿ ಅನಾಗರೀಕನಾದ ಮಾನವ ತನ್ನ ಆಹಾರಕ್ಕಾಗಿ ಪ್ರಾಣಿಗಳು ಬೇಟೆಯಾಡಿ ತಿಂದು ಬಿಸಾಡಿದ ಮಾಂಸದ ತುಂಡುಗಳನ್ನು ತಿಂದು ಇಂದು ಶ್ರೇಷ್ಠ ಮಾಂಸಾಹಾರಿ ಎನ್ನಿಸಿಕೊಂಡಿದ್ದಾನೆ. ಆದರೆ ಇಂದು ತಿನ್ನುವ ಆಹಾರವನ್ನು ಮಡಿ ಮೈಲಿಗೆಯು ಹಿನ್ನಲೆಯಲ್ಲಿ ನಿಷೇಧಿಸಿದರೆ ಪ್ರಪಂಚದ್ಯಾದಂತ ಜನರ ಬದುಕೇನು? ಜಗತ್ತಿನಲ್ಲಿ ಹೆಚ್ಚು ಜನ ಮಾಂಸಾಹಾರಿಗಳು ಇನ್ನು ಉಳಿದ ಕಡಿಮೆ ಜನಸಂಖ್ಯೆ ಸಸ್ಯಾಹಾರಿಗಳು. ಅದರಲ್ಲೂ ಧರ್ಮ ಪರಿಕಲ್ಪನೆಯಲ್ಲಿ ಮನುಷ್ಯ ತನ್ನ ಸ್ವಾರ್ಥಕ್ಕಾಗಿ ಸಾವಿರಾರು ಜಾತಿಗಳನ್ನು ಸೃಷ್ಟಿಸಿ ಕೊಂಡಿದ್ದಾನೆ ನಿಷೇಧ ಎನ್ನುವುದಕ್ಕೆಲ್ಲ ವಿರೋಧವಿದೆ. ಜನರನ್ನು ಜಾಗೃತಗೊಳಿಸಿ ಸ್ವ–ಇಚ್ಛೆಯಿಂದ ಮಾಂಸಾಹಾರವನ್ನು ನಿಷೇಧಿಸುವಂತೆ ಮಾಡಬೇಕು. ಇಲ್ಲದಿದ್ದರೆ ಮನುಷ್ಯನ ಸ್ವಭಾವದಿಂದ ಅದು ದೂರವಾಗುವುದಿಲ್ಲ.

ದಮನಕಾರಿ ಹಿಂಸೆ, ಕೊಲ್ಲುವ ಸಂಸ್ಕೃತಿಯನ್ನು ವಿರೋಧಿಸಲೇ ಬೇಕು ಆದರೆ ಗೋಹತ್ಯೆ ನಿಷೇಧ. ಸಸ್ಯಾಹಾರ ನಿಷೇಧ ಕಾಯ್ದೆ ಕೂಡ ತರಬಹುದು ಅದರಿಂದ ಮನುಷ್ಯನ ಇಚ್ಛಾ ಆಹಾರ ಅದು ಅವನ ಬದುಕಿನ ಕ್ರಮ ವಿಧಾನವು ಹೌದು.

**೨. ಅಂದಿನ ಬಾಯಾರಿಕೆ ಮತ್ತು ಇಂದಿನ ದಾಹ:**

ಪರಂಪರೆಯಿಂದ ಬಂದಂತಹ ಊಟ, ಪಾನೀಯಗಳು. ಕಾಲಬದಲಾದಂತೆ ಅವು ಬದಲಾಗಿವೆ ಹಿಂದೆ ಬುದ್ಧಿವಂತ ಕಾಗೆ ಬಾಯಾರಿಕೆಯಾದಾಗ ಮಡಿಕೆಯಲ್ಲಿದ್ದ ಅರ್ಧ ನೀರಿಗೆ ಕಲ್ಲಗಳನ್ನು ಹಾಕಿ ನೀರು ಮೇಲಕ್ಕೆ ಬಂದ ಮೇಲೆ ಕುಡಿದು ಹೋದ ಕತೆ ಆದರೆ ಈಗಿರುವುದು ಪ್ಲಾಸ್ಟಿಕ್ ಬಾಟಲ್‌ನಲ್ಲಿ ಆರ್ಧ ನೀರು ಇತ್ತು ಕಾಗೆ ಕಲ್ಲು ಹಾಕಿದರು. ನೀರು ಕುಡಿಯಲಾಗಲಿಲ್ಲ. ಆದರೆ ಇನ್ನೊಂದು ಕಾಗೆ ಕೊಕ್ಕನ್ನು ಕಲ್ಲಿನಿಂದ ಚೂಪಾಗಿಸಿ ಮಸೆದು ಸ್ಪ್ರೈಟ್‌ಬಾಟಲಿಯನ್ನು ಕುಕ್ಕಿ ಆದರಿಂದ ಚಿಮ್ಮಿದ ಸ್ಪ್ರೈಟ್ ಕುಡಿದು ಹಾರಿಹೋಯಿತು ಇದು ಇವತ್ತಿನ ಸಂಸ್ಕೃತಿಯಾಗಿದೆ.

**೩. ಬೇಸಾಯದಲ್ಲಿ ಬದುಕುಳಿಯಲು:**

ವೃತ್ತಿಯ ಪರಂಪರೆಯು ಬದುಕಿನ ಸಂಸ್ಕೃತಿಯಾಗಿದೆ ಉದಾ : ಹಿಂದಿನ ಬದುಕಿನಲ್ಲಿ ಭಾರತದ ಬೆನ್ನಲುಬಾಗಿದ್ದು ರೈತ ಇಂದೂ ಬೆನ್ನು ಮೂಳೆ ಮುರಿದ ವ್ಯಕ್ತಿಯಾಗಿ ಭಿಕ್ಷೆ ಬೇಡುವ ಸ್ಥಿತಿಗೆ ಬಂದಿದ್ದಾನೆ ಇವತ್ತಿನ ಯಾಂತ್ರಿಕ ಕೃಷಿಯಿಂದ ರೈತ ತನ್ನ ಬದುಕಿಗೆ ತಾನೆ ಹಳ್ಳ ತೋಡಿಕೊಳ್ಳುತ್ತಿದ್ದಾನೆ. ಉದಾ:- ನಾವು ತಿನ್ನವ ಆಹಾರ ಪದಾರ್ಥಗಳೆಲ್ಲ ರಸಾಯನಿಕ ಗೊಬ್ಬರ ಬೀಜಗಳಿಂದ ಬೆಳೆದವೂ ಆದರಿಂದ ಸತ್ವ ಇಲ್ಲ. ಪೌಷ್ಟಿಕಾಂಶ ಇಲ್ಲವೇ ಇಲ್ಲ, ಎಲ್ಲವೂ ರಾಸಾಯನಿಕವೇ ಆಗಿರುತ್ತದೆ.

ಈ ಕಾಲದಲ್ಲಿನ ಸರ್ಕಾರಗಳ ಆಡಳಿತಗಳ ನಿರ್ಲಕ್ಷ್ಯದಿಂದಾಗಿ ರೈತ ಮಾನಸೂನ್ ಮಾರುತಗಳೊಂದಿಗೆ ಜೂಟಾಟ ಆಡಿ ಬೇಸಾಯ ಎಂದರೆ 'ನೀಸಾಯ' ಎಂದಾಗಿದೆ. ಕೊನೆಗೆ ಅತ್ಯಹತ್ಯೆ ಮಾಡಿಕೊಳ್ಳವ ಪರಿಸ್ಥಿತಿ ಸೃಷ್ಠಿಯಾಗಿದೆ ಬೆಳೆ ಬೆಳೆದರೂ ಮಧ್ಯವರ್ತಿಗಳೇ ಶ್ರೀಮಂತರಾಗಿ ಶ್ರಮಪಟ್ಟು ರೈತನಿಗೆ ಸಾಲವೇ ಪ್ರಧಾನವಾಗುತ್ತದೆ. ಬದುಕು ಉಳಿಯುವುದೇ ಕಷ್ಟವೆನಿಸಿದೆ. ಕಾರಣವೆಂದರೆ, ಇಂದೂ ಭಾರತದ ರೈತ ಶ್ರಮಜೀವಿಯಾಗಿದ್ದರೂ ದುಡಿಮೆಯ ಪ್ರತಿಫಲ ಶ್ರೀಮಂತವಾಗಿರುತ್ತದೆ. ಬಂಡವಾಳಶಾಹಿಗಳ ಕಪಿಮುಷ್ಟಿಯಿಂದ ರೈತ ಕಂಗಾಲಾಗಿದ್ದಾನೆ.

**೪. ಖಾಸನೀಸ ಮುಖೇನ ಸಣ್ಣ ಕಥೆ:**

ಜಾನಪದ ಸಾಹಿತ್ಯದಲ್ಲಿ ಬರುವ ಕಥಾಸಾಹಿತ್ಯದ ಮೂಲಕ ವ್ಯಕ್ತಿಯ ಜೀವನಕ್ಕೆ ಕೆಲವು ಪ್ರೇರಣೆ ಪ್ರಭಾವಗಳು, ಆದರ್ಶಗಳೂ ಅದು ಕಥಾ ಸಾಹಿತ್ಯದಿಂದ ಮಾತ್ರ ಸಾಧ್ಯ ಪರಿವರ್ತನೆ ಜಗದ ನಿಯಮ. ಆದರಿಂದ ವ್ಯಕ್ತಿಯ ಸಂಸ್ಕೃತಿಯನ್ನು ಬದಲಾಯಿಸುತ್ತದೆ.

ಕಥಾಸಾಹಿತ್ಯದಲ್ಲಿನ ಕತೆಗಳು ಒಂದೊಂದು ಆದರ್ಶವನ್ನು ತಿಳಿಸುತ್ತವೆ. ಉದಾ: ಪಂಚತಂತ್ರ ಕಥೆಗಳ ಮೂಲಕ ಪ್ರಾಣಿ-ಪಕ್ಷಿಗಳ ಸುಮಧುರವಾದ ಜೀವನವನ್ನು ನೆನೆಪಿಸುವುದಾಗಿದೆ. ಅಲ್ಲಿ ದುಷ್ಟರಿಗೆ ಬದುಕಿಲ್ಲ, ಶಿಷ್ಟರಿಗೆ ಮಾತ್ರ ಎನ್ನುವಂತಹ ಕಥೆಗಳು, 'ಶಕ್ತಿಗಿಂತ ಯುಕ್ತಿ ಮೇಲು' ಎನ್ನುವಂತೆ, ಸಾಮಾನ್ಯರಿಗೂ ಪ್ರಕೃತಿ ಬದುಕುವ ಹಕ್ಕನ್ನು ನೀಡಿದೆ. ಇದಲ್ಲದೆ ಹಲವಾರು ಲೇಖಕರ ಸಣ್ಣ-ಕಥೆಗಳು ಬದುಕನ್ನು ಪರಿವರ್ತಿಸುತ್ತವೆ. ತೇಜಸ್ವಿಯವರ ಅಬಚೂರಿನ ಪೋಸ್ಟಾಫೀಸು, ತಬರನಕತೆ, ಹಾಗೆಯೇ ಯು.ಆರ್.ಅನಂತಮೂರ್ತಿಯವರ 'ಮೌನಿ', ಲಂಕೇಶರ 'ಉಮಾಪತಿಯ ಸ್ಕಾಲರ್‌ಶಿಪ್ ಯಾತ್ರೆ'ಯಂತೂ ಸಂಕೀರ್ಣವಾಗಿ ಈ ನೆಲದ ತಲ್ಲಣಗಳನ್ನು ಸಂವೇದಿಸುತ್ತವೆ. ಮಾಸ್ತಿಯವರು 'ಸಣ್ಣಕಥೆಗಳಜನಕ'ನೆಂದೇ ಹೆಸರುಗಳಿಸಿದ್ದು, ಅವರ ಕಥೆಗಳಲ್ಲಿ ಇತಿಹಾಸ, ಪರಂಪರೆ, ಜೀವನ ಕಟ್ಟಿಕೊಡುವ ಹಲವಾರು ಅಂಶಗಳನ್ನು ಮೊಸರಿನ ಮಂಗಮ್ಮ, ರಂಗಸ್ವಾಮಿಯ ಪ್ರಣಯ ಕತೆ, ನಿಜಗಲ್ಲಿನ ರಾಣಿ ಮುಂತಾದವು ತಿಳಿಸುತ್ತವೆ.

# ಅಧ್ಯಾಯ ೩.೪

## ಧಾರ್ಮಿಕ

**ಧಾರ್ಮಿಕ** : ಧರ್ಮಪದವನ್ನು ಮೂಲತಹ ಸಂಸ್ಕೃತದಿಂದ ಪದ 'ಧೃ' ಎಂದರೆ ಧರಿಸು, ಎತ್ತಿಹಿಡಿ, ಪೋಷಿಸು ಧರಿಸುವಂತಹದ್ದು, ಒಟ್ಟಾರೆ ವ್ಯಕ್ತಿಯನ್ನು ಮತ್ತು ಸಮಾಜವನ್ನು ಒಳ್ಳೆಯ ಸ್ಥಿತಿಯಲ್ಲಿ ಎತ್ತಿ ಹಿಡಿಯುವ ಶಕ್ತಿ ಅದನ್ನು ಹೇಳಬಹುದು. "ಧರ್ಮ ಎನ್ನುವುದು ಬೇರೆ ಬೇರೆ ಅರ್ಥಗಳಲ್ಲಿ ಉಪಯೋಗಿಸಬಹುದು. ಕರ್ತವ್ಯ ಸ್ವಭಾವ, ಅಚಾರ, ದಾನ, ಧರ್ಮ ಎಂದರೆ ಶಾಶ್ವತವಾದ ದೇವರಲ್ಲಿ ನಂಬಿಕೆ ಹೊಂದಿರುವುದೇ ಧರ್ಮ."[೧೪]

"ಧರ್ಮವು ಜನಸಾಮಾನ್ಯರ ಮನಸುಗಳನ್ನು ಮಂಕುಗೊಳಿಸಿ ಅವರಲ್ಲಿ ಈಡೇರಲಾರದ ಕನಸುಗಳನ್ನು ಬಿತ್ತಿ, ಸಾಮಾಜಿಕ, ಅಸಾಮಾನತೆ, ಅಜ್ಞಾನ ಮತ್ತು ದಾರಿದ್ರ್ಯವನ್ನು ಮುಂದುವರಿಸುವಂತೆ ಮಾಡುತ್ತದೆ. ಧರ್ಮವೂ ಜನಸಾಮಾನ್ಯರ ಮಾದಕ ವಸ್ತು ಎಂಬ ನಾಣ್ಣುಡಿಯು ಧರ್ಮವನ್ನು ಕುರಿತು ಮಾರ್ಕ್ಸ್‌ವಾದಿ ವ್ಯಾಖ್ಯಾನದ ಆಧಾರಸ್ತಂಭವಾಗಿದೆ".[೧೫]

### ೧. ಧಾರ್ಮಿಕ ನನ್ನ ದೇವರು:

ಪ್ರತಿಕೆಯವರು ನನಗೆ ದೇವರಿಲ್ಲ ಎಂದುಕೊಂಡು ಏನೋ ಕೇಳಲೇ ಇಲ್ಲ ಆದ್ದರಿಂದ ನನ್ನ ದೇವರು ನನ್ನೊಳಗೆ ಉಳಿಯಿತು. ಮೈಮೇಲೆ ಬರುವ ದೇವರುಗಳು ಸಾರ್ವಜನಿಕವಾದ ಆಲೋಚನೆಗಳನ್ನು ಮಾಡುತ್ತೇವೆ. ಉದಾ: ಸಿದ್ದಲಿಂಗಯ್ಯನವರ ಮನೆ ಮಂಚಮ್ಮ ಮೊದಲು ಯಾರಿಗೆ ಮನೆ ಇಲ್ಲವೋ ಅವರಿಗೆ ಮನೆಕಟ್ಟಿಸಿ ಅಮೇಲೆ ನನಗೆ ಸೂರು ಕಟ್ಟಿ ಎನ್ನುವ ಮೂಲಕ ಎಲ್ಲೋ ಒಂದು ಕಡೆ ಸಮಾಜದ ಹಿತವೇ ನನ್ನ ಹಿತ ಎನ್ನುವ ಉದಾರ ಗುಣಗಳ ದೇವರನ್ನು ಕಾಣಬಹುದು. ಜೊತೆಗೆ ಭಾವಣೆ ಇಲ್ಲದ ಗುಡಿಯಲ್ಲಿ ಕಾರುಣ್ಯ ಸಮತೆಯ ಬುದ್ದನನ್ನು ಇಟ್ಟರೆ ಅದೇ ನನ್ನ ದೇವರಾಗುತ್ತದೆ. ಅಂದರೆ ದೇವರು ಎಲ್ಲೋ ಇಲ್ಲ, ಆತ ನಮ್ಮೊಳಗಿನ ಮನಸ್ಸಿನಲ್ಲೆ ನೆಲೆಸಿದ್ದಾನೆ. ಆತ ಹಸಿದವನಿಗೆ ಅನ್ನದ ರೂಪದಲ್ಲಿ ಬಾಯಾರಿದವನಿಗೆ ನೀರಿನ ರೂಪದಲ್ಲಿ ಕಾಣಿಸಿಕೊಳ್ಳುತ್ತಾನೆ.

ಜಿ.ಎಸ್.ಶಿವರುದ್ರಪ್ಪನವರು "ಎಲ್ಲೋ ಹುಡುಕಿದೆ ಇಲ್ಲದ ದೇವರ ಕಲ್ಲುಮಣ್ಣುಗಳ ಗುಡಿಯೊಳಗೆ ಇಲ್ಲೇ ಇರುವ ಪ್ರೀತಿ–ಸ್ನೇಹಗಳ ಗುರುತಿಸದಾದೇನು ನಮ್ಮೊಳಗೆ"–ಎಂದರೆ ನಮ್ಮ ಸುತ್ತ–ಮುತ್ತಲಿನ ಸಹಾಯಕರೇ ಕಷ್ಟದಲ್ಲಿ ನೆರವಿಗೆ ಬರುವರೇ ನಿಜವಾದ ದೇವರು ಎನ್ನುತ್ತಾರೆ.

---

[14] ಧರ್ಮ ಮತ್ತು ವೈಚಾರಿಕತೆ : ಬಿ.ವಿ.ವೀರಭದ್ರಪ್ಪ – ಪುಟ – ೬

[15] ಅದೇ ಪುಟ – ೬೭

## ೨. ದಯೆಗಾಗಿ ನೆಲೆ ಒಣಗಿದೆ:

ಕ್ರಿಸ್ತನ ರಕ್ತದಿಂದ ಭೂಮಿಗೆ ೨೦೦೦ ವರ್ಷಗಳ ಇತಿಹಾಸವಿದೆ. ಬುದ್ಧನ ಕಾಲಮಾನವೆನ್ನುವುದು ನಿಗದಿ ಇಲ್ಲ. ಆದರೂ ಕ್ರಿಸ್ತನ ರಕ್ತ ಅಂದಿಗಿಂತ ಇಂದು ಹೆಚ್ಚು ಬೇಕಾಗಿದೆ. ಕ್ರಿಸ್ತ ಮತ್ತು ದಯೆಗಾಗಿ ನೆಲ ಒಣಗಿದೆ ಇಂದು.

## ೩. ಅಹಿಂಸೆಯ ಹುಡುಕುತ್ತಾ:

ರಷ್ಯಾನ್ ಲೇಖಕ ದಾಸ್ತವಸ್ಕಿಯ 'ಅಪರಾಧ ಮತ್ತು ಶಿಕ್ಷೆ' ಕಾದಂಬರಿಯಲ್ಲಿ ನಾಯಕ ರೋಡಿಯನ್ ಒಂದು ಮುದುಕಿಯ ಕೊಲೆ ಮಾಡಲು ಹೋಗಿ ಕೊನೆಗೆ ಆ ಕೊಲೆ ನೋಡಿದ ಆಕೆಯ ತಂಗಿ, ಮತ್ತೊಬ್ಬ ವ್ಯಕ್ತಿಯನ್ನು ಕೊಲೆ ಮಾಡಿದ, ಇದರಿಂದ ಆಹಿಂಸೆ ಮುಂದುವರಿಯುತ್ತಾ ಹೋಗುತ್ತದೆ. ಆಹಿಂಸೆ ಹಿಡಿದುಕೊಂಡು ತನ್ನ ವ್ಯಾಪ್ತಿ ಮೀರಿ ದೇವರು ಧರ್ಮಕ್ಕೆ ತೊಂದರೆ ಕೊಡುತ್ತಿದ್ದಾನೆ ಎಂದು ನಿಮಗೆ ಅನ್ನಿಸಿದರೆ ಕ್ಷಮೆ ಇರಲಿ. ಒಂದು ಧರ್ಮದಲ್ಲಿ ಧರ್ಮ ಉಂಟೋ ಇಲ್ಲವೋ ಎಂಬ ಅಳತೆಯನ್ನು ಆಹಿಂಸೆ ಮತ್ತು ಐಕ್ಯತೆಯಿಂದ ಅಳೆಯಬೇಕು. ಜೊತೆಗೆ ಮನುಷ್ಯತ್ವದ ನೆಲೆಯಲ್ಲಿ ನಡೆಯಬೇಕು.

ಬಸವಣ್ಣನವರು "ದಯವೇ ಧರ್ಮದ ಮೂಲವಯ್ಯ" ಎನ್ನುವ ಮೂಲಕ ಸಕಲ ಪ್ರಾಣಿ–ಪಕ್ಷಿ, ಜೀವಚರಗಳಲ್ಲಿ 'ದಯೆ'ಯನ್ನು ತಂದಾಗ ನಿಜವಾದ ಧರ್ಮ ಉಳಿಯುತ್ತದೆ ಇಲ್ಲದಿದ್ದರೆ ಧರ್ಮಕ್ಕೆ ಉಳಿವಿಲ್ಲ ಎಂಬ ಅಂಶವನ್ನು ತಿಳಿಸಿದ್ದಾರೆ.

## ೪. ಬುದ್ದನೆಡೆಗೆ ಒಂದು ನಡಿಗೆ:

ಇಂದು ದಲಿತರು ಬೌದ್ಧ ಧರ್ಮಕ್ಕೆ ಸೇರಬೇಕೆ ? ಬೇಡವೇ ಎಂಬ ಚರ್ಚೆಯಾಗಿದೆ. ಏಕೆಂದರೆ ಅಂಬೇಡ್ಕರ್ ಸಾಯುವ ಸಂದರ್ಭದಲ್ಲಿ ಬೌದ್ಧನಾಗಿ ಸಾಯುವೆ ಎಂಬ ಮಾತು ಎಲ್ಲ ದಲಿತರನ್ನು ಎಚ್ಚರಿಸಿದೆ. ಒಂದು ಕಡೆ ಬಸವಲಿಂಗಪ್ಪನವರು, 'ಬುದ್ಧ ಬರಲಿ ನಮ್ಮೂರಿಗೆ' ಎಂದರೆ ಶ್ರೀನಿವಾಸಪ್ರಸಾದ್ 'ಬುದ್ಧನಡೆಗೆ ಮರಳಿ ಮನೆಗೆ' ಎಂಬ ಕಾರ್ಯಕ್ರಮಗಳಿಂದ ಬುದ್ಧನ ಕಾರುಣ್ಯ ಸಮಾನತೆ ದೊರಕಲಿ ಎಂಬುದೇ ಆದರೆ ೧೨ನೇ ಶತಮಾನದ ವಚನ ಸಾಹಿತ್ಯ ಎಲ್ಲಕ್ಕಿಂತಲೂ ಮಿಗಿಲಾದ ಸಮಾನತೆಯ ವ್ಯವಸ್ಥೆ ವಿರುದ್ಧ ಹೋರಾಟ ಮಾಡುತ್ತದೆ. ಆದರಿಂದ ಇಂದೂ ಬಂತೇಜಿಗಳು ತಳ ಸಮುದಾಯದ ಜನತೆಗೆ ಸಮಾನತೆ ತರುವ ದಿಕ್ಕಿನತ್ತ ನಡೆಸಬೇಕು.

ಗಾಂಧೀಜಿ ಒಮ್ಮೆ ಶ್ರವಣಕುಮಾರನ ನಾಟಕ ನೋಡುತ್ತಿದ್ದಾಗ, ದಶರಥನ ಬಾಣಕ್ಕೆ ಬಲಿಯಾದ ಶ್ರವಣಕುಮಾರನ ಹಿಂಸೆಯ ಸಾವು, ಗಾಂಧೀಜಿಯವರನ್ನು ಅಹಿಂಸೆಯ ಪ್ರತಿಪಾದಕನೆನಿಸಿತ್ತು.

## ೫. ಅಶೋಕಪುರಂ ಗೋವಿಂದರಾಜುವಿಗೆ ಹೆಣ್ಣಿಲ್ಲ?

"ಅಶೋಕಪುರಂ ಅರಮನೆನಗರಿಯ ದಲಿತಕೇರಿ, ಊರು ಹಳ್ಳಿಗಿಂತ ಭಿನ್ನ ಸ್ವಾಭಿಮಾನಕ್ಕೆ ಹೆಸರಾಗಿದ್ದ. ಮೈಸೂರಿನ ಆಶೋಕಪುರಂನಲ್ಲಿ ಗೋವಿಂದರಾಜು ಸವರ್ಣಿಯರು ಹೆಣ್ಣನ್ನು ಬಯಸುತ್ತಾನೆ".[೧೬] ಆದರೆ ಕುಲವು ಕೆಟ್ಟರೆ ಸನಾತನ ಕುಲಧರ್ಮಗಳು ನಾಶವಾಗುತ್ತವೆ. ಧರ್ಮವು ಹಾಳಾದರೆ ಆಧರ್ಮವೂ ವ್ಯಾಪಿಸುತ್ತದೆ. ಹೀಗೆ ಕುಲಗೆಟ್ಟು ಸನಾತನ ಧರ್ಮನಾಶವಾಗಿ ಆಧರ್ಮ ಹೆಚ್ಚಿದರೆ ಮಾತ್ರ ಗೋವಿಂದರಾಜುಗೆ ಹೆಣ್ಣು ಸಿಕ್ಕುವುದು ಇಲ್ಲ ಹೆಣ್ಣು ಸಿಗುವುದಿಲ್ಲ ಆದರಿಂದ "ಸವರ್ಣಿಯರು ಅಮಾನವೀಯರು ಕಟ್ಟಿರುವ ನರಕ ನಾಶ ಮಾಡಿರಿ", ಗೀತಾ ಎಂಬ ಹೆಸರಿನ ಸವರ್ಣಿಯರು ಹುಡುಗಿಯ ನಿಮ್ಮವಳಾಗಲಿ ಎಂದರೆ ಭಗವತ್ ಗೀತೆ ಧಿಕ್ಕರಿಸಿ ನಾವು ನಮ್ಮ ಜೀವನ ರೂಪಿಸಿ ಕೊಳ್ಳಬೇಕಾಗಿದೆ.

## ೬. ಮತಾಂಧರ ಮೆದಳೊಳಗೆ ಕೆಲವು ಕ್ಷಣಗಳು:

ಗುಡಿ ಚರ್ಚು ಮಸೀದಿಗಳೆಲ್ಲ ಭೂತಕಾರವಾಗಿ ತಲೆ ಎತ್ತಿ ನಿಂತಿರುವ ತಮ್ಮ ಸ್ವಾರ್ಥದ ಕೆನ್ನಾಲಿಗೆ ಚಾಚಿ ಜನರನ್ನು ನುಂಗಿ ನೀರು ಕುಡಿಯುತ್ತಿವೆ. ಇನ್ನೊಂದೆಡೆ ಮಂದಿರ ಮಸೀದಿಗಳು ಭಾರತದ ನೆಮ್ಮದಿಯನ್ನು ಕೆಡಿಸಿದ ಆರ್.ಎಸ್.ಎಸ್. ಬಿಜೆಪಿಗಳ ನೆಮ್ಮದಿಯೇ ಹೀಗೆ ಇರಬಹುದೇ ತಮ್ಮ ಭೂತ ತೃಪ್ತಿಗೆ ದೇವರನ್ನು ಬಲಿಕೊಡುವರು ಸದ್ಯಕ್ಕೆ ಪಾಪದ ರಾಮನನ್ನು ತಮ್ಮ ಬಾಣ ಮಾಡಿಕೊಂಡಿರುವವರು ಇದ್ದಾರೆ. ಇನ್ನೊಂದು ಕಡೆ ಚಾತುವರ್ಣದಲ್ಲಿನ ತಮ್ಮ ದೈವ ಸಾಕ್ಷತ್ಕಾರಕ್ಕಾಗಿ ರಾಮನೆಂಬ ದೇವರನ್ನು ಬಲಿಕೊಟ್ಟು ಹೊರ ನೋಟಕ್ಕೆ ಬಾಬರಿ ಮಸೀದಿಯನ್ನು ಧ್ವಂಸ ಮಾಡಿದರು. ಕಾಶ್ಮೀರದಲ್ಲಿ ನಾಲ್ಕಾರು ದೇವಾಲಯಗಳನ್ನು ಧ್ವಂಸ ಮಾಡಿದರು. ಒಟ್ಟಾರೆ ದೇವಸ್ಥಾನ, ಮಸೀದಿ, ಚರ್ಚು ಕೆಡವಿದರನ್ನು ಕೆಡಿಗರಾದ ಆರ್.ಎಸ್.ಎಸ್. ಭಜರಂಗದಳ ಮುಂತಾದವರು ಸಂಚು ಮಾಡಿದ್ದರು. ದಲಿತನೊಬ್ಬ ಸಂವಿಧಾನ ಬರೆದಿರುವುದನ್ನು ಸಹಿಸಲಾರದವರು ಏನೂ ಬೇಕಾದರೂ ಮಾಡಬಲ್ಲರೂ. ಇದರಿಂದ ಮತಾಂಧತೆ ಮೊದಲು ಮಾನವತ್ವದ ನೆಲೆಯಲ್ಲಿ ಮಾನವ ಧರ್ಮವಾಗುವುದು ಮುಖ್ಯವೆನಿಸಿದೆ.

## ೭. ರಾಮನನ್ನು ಹುಡುಕಬೇಕಾಗಿದೆ:

ರಾಮನಂತ ಪಾಪಿಗಳ ಹೆಸರಲ್ಲೇ ಇಂದೂ ಧಾರ್ಮಿಕ ಸಂಘರ್ಷಗಳಾಗಿವೆ. ಅಂದರೆ ರಾಮ ನಾಮದ ಹಿಂದೆ ಏನೆಲ್ಲ ರಾಜಕೀಯ ಸ್ವಾರ್ಥ ಅಡಗಿದೆ ಎಂಬುದನ್ನು ರಾಮಸೇನೆಯವರಿಂದ ತಿಳಿಯಬಹುದು. ಏಕೆಂದರೆ ಇವರಿಗೆ ರಾಮನು ಹೋಗಲಿ, ರಾಮನು ಮೌಲ್ಯ ಹೋಗಲಿ ರಾಮ ತತ್ವ ಸಿದ್ದಾಂತ, ಆದರ್ಶಗಳೆಲ್ಲ ಗಾಳಿಗೆ ತೂರಲಿ ಆದರೆ ರಾಮನ

---

[16] ಸಮಾನತೆಯ ಕನಸ್ಸನ್ನು ಮತ್ತೆ ಕಾಣುತ್ತ – ಕೆ.ಎನ್.ಶಾಂತಕುಮಾರ – ಪುಟ – ೧೪೨

ಹೆಸರೊಂದೇ ಇರಲಿ. ಇದರಿಂದ ಯಾವ ಧರ್ಮ ಸಿದ್ದಿಸುವುದಿಲ್ಲ. ಒಟ್ಟಾರೆ ರಾಮನ ವ್ಯಕ್ತಿತ್ವ ಹುಡುಕಬೇಕು ಹೊರತು ರಾಮನಲ್ಲ.

**೮. ಮಂದಿರ ಅಗೆದರೆ ಒಳಗೆ ಮಂಡೆಲ್ ಹಾಗೂ ಒಂದು ಡಿ.ಎನ್.ಎ.ಪರೀಕ್ಷೆ:**

ಭಾರತದ ಯಾವುದೇ ದೇವಾಲಯಗಳನ್ನು ಅಗೆದರೆ ಅದರಲ್ಲಿ ಬರುವುದು ಮಂಡೆಲ್‌ರವರು ಧ್ವನಿಯಾಗಿದೆ. ಶ್ರೀಯುತರು ಸಮಾಜದಲ್ಲಿನ ಸಮಾನತೆ ತರಲು ಶ್ರಮಿಸಿದವರು. ಇಂದೂ ಆಧರ್ಮಿಯರ ಸಂಖ್ಯೆ ಹೆಚ್ಚಾಗಿದೆ. ಇವರಿಗೆ ಧರ್ಮ ನಾಶ ಮಾಡುವುದೇ ಅವರ ಪ್ರವೃತ್ತಿ ಉದಾ : ವ್ಯಾಸ ಒಬ್ಬ ಬೇಡ ಜನಾಂಗದ ಸಾಮಾನ್ಯ ವ್ಯಕ್ತಿ. ಆದರೆ ತಾನು ಶೂದ್ರ ತಪಸ್ವಿಯಲ್ಲಿ ಶೂದ್ರನು ತಪಸ್ಸು ಮಾಡುವಾಗ ರಾಮನು ಅವನನ್ನು ಕೊಲ್ಲುತ್ತಾನೆ ಎಂದಾಗ ವ್ಯಾಸನು ತನ್ನನೇ ತಾನೇ ಕೊಂದು ಕೊಳ್ಳುವಂತೆ ಎನಿಸಿದೆ.

**೯. ಹಿಂದೂ ಸಮಾಜ್ಯೋತ್ಸವ ಮತ್ತು ಆರ್.ಎಸ್.ಎಸ್:**

ಆರ್.ಎಸ್.ಎಸ್.ನ ಗುರೂಜಿ ಶ್ರೀ ಗೋಲ್ವಾಳ್ಕರ್ ಜನ್ಮ ಶತಾಬ್ದಿಯಂದು ವಿಜೃಂಭಣೆಯ ಹಿಂದೂ ಉತ್ಸವ ನಡೆಯುತ್ತಿದೆ. ಅದರಲ್ಲಿ ಬಸವಣ್ಣ, ಅಂಬೇಡ್ಕರ್ ಹಾಗೂ ಗೋಲ್ವಾಳ್ಕರ್ ಪೋಟೋ ರಾರಾಜಿಸುತ್ತಿದೆ. ಆದರೆ ಮುಂದೊಂದು ಕಾಲಘಟ್ಟದಲ್ಲಿ ಬದಲಾವಣೆಯಾಗದೆ ಇದು ವಂಚನೆಯ ಪರಮಾವಧಿ ಅಧಿಕಾರ ಹಣಕ್ಕಾಗಿ ಗುರುವಿಚಾರವನ್ನೇ ಹತ್ಯೆ ಮಾಡಲು ಹೇಸದವರು ನಾಳೆ ಅಧಿಕಾರಕ್ಕೆ ಬಂದರೆ ಯಾವುದಕ್ಕೂ ಹೇಸಲ್ಲ. ಆದರಿಂದ ಆರ್.ಎಸ್.ಎಸ್. ಭಜರಂಗ ದಳ ಹಿಂದುತ್ವದ ಒಂದು ಸಮಷ್ಟಿಯಲ್ಲಿ ಇತರರ ಬದುಕನ್ನು ತುಳಿಯುತ್ತಿದೆ. ಇದು ಧರ್ಮವಲ್ಲ. ಧರ್ಮವೆಂದರೆ ಎಲ್ಲರನ್ನು ಒಂದಾಗಿ ಕಾಣುವುದು. ಧರ್ಮ ಸಹಿಷ್ಣುತೆ ಮುಖ್ಯ. ಎಲ್ಲರನ್ನು ತನ್ನಂತೆ ಪ್ರೀತಿಸಬೇಕು. ಇದೇ ನಿಜವಾದ ಧರ್ಮದ ಉತ್ಸವ.

**೧೦. ಒಂದು ಸ್ವಾಗತ ಭಾಷಣ:**

ಲಂಕೇಶ, ಆನಂತಮೂರ್ತಿ ತೇಜಸ್ವಿ ಈ ಮೂವರನ್ನು ಸಭೆಗೆ ಆಹ್ವಾನಿಸಿ, ಸ್ವಾಗತಿಸುವ ಸಂದರ್ಭದಲ್ಲಿ ಜಾತಿ ಮತ್ತು ಧರ್ಮಗಳನ್ನು ಹೇಗೆ ಎದುರಿಸುತ್ತಾರೆ ಎಂಬುದೇ ಸಭೆಯ ವಿಷಯ.

ಮೊದಲಿಗೆ ಪಿ.ಲಂಕೇಶ್‌ರು ಧರ್ಮ ಮತ್ತು ಜಾತಿಯನ್ನು ವರ್ತಮಾನದ ಬದುಕಿನ ಒಂದು ತಾತ್ವಿಕ ಚಿಂತೆನಯಲ್ಲಿ ತತ್ವ, ನಡಾವಳಿ, ಸ್ವಭಾವ ಎನೆಂಬುದನ್ನು ಗಮನಿಸುತ್ತಾರೆ. ಅದರಲ್ಲಿ ಬುದ್ಧ, ಬಸವಣ್ಣ ಮುಂತಾದವರು ಯಾರೇ ಇದ್ದರೂ ಅವರನ್ನು ಸುತ್ತಲಿನ ವ್ಯವಸ್ಥೆಯೊಂದಿಗೆ ಸಮಾಲೋಚನೆ ಮಾಡುತ್ತಾರೆ. ಇದು ಬಹುಶಃ ಧರ್ಮ ತನ್ನ ಹುಟ್ಟಿನಲ್ಲಿ ಪಡೆದುಕೊಂಡು ಕೈಕಾಲು ಆಡಿಸುವಂತಹ ಸ್ಥಿತಿಯನ್ನು ಕಾಣುವ ಕಣ್ಣಿನಂತೆ ಎಂದಿದ್ದಾರೆ.

**ಯು.ಆರ್.ಅನಂತಮೂರ್ತಿಯವರು:** ಜಾತಿ ಮತ್ತು ಧರ್ಮಗಳನ್ನು ಈ ರೀತಿ ಎದುರಿಸುವ ಅಂದರೆ ಜಾತಿ ಮತ್ತು ಧರ್ಮ ಒಂದು ಕೊಳಕಿನ ಬಚ್ಚಲಿನಲ್ಲಿ ಅಕ್ಕಪಕ್ಕ ಸರಿಸಿ ತಿಳಿಜಲವನ್ನು ಉಳಿಸಿಕೊಳ್ಳಬೇಕು ಎನ್ನುವ ಮನಸ್ಸಿನಿಂದ ಪ್ರಯತ್ನ ಪಡುತ್ತಾರೆ. ಶಿವಾಜಿ ಹಿಂದೂಧರ್ಮ ಇಷ್ಟಪಡುವುದಿಲ್ಲ. ಬದಲಿಗೆ ಋಷಿಗಳ ಕಾಲದಲ್ಲಿನ ಬದುಕಿಗೆ ಹೆಚ್ಚು ಒತ್ತು ಕೊಟ್ಟಿದ್ದಾರೆ.

**ತೇಜಸ್ವಿ:** ಯಾವುದು ಬೇಡ ಎಂದು ನಿರಾಕರಿಸಿ 'ಚಿದಂಬರ ರಹಸ್ಯ ಕಾದಂಬರಿಯಂತೆ ಅವರು ಮಾಡಿದಂತೆ ಪ್ರೀತಿ ಉಳಿಸೋದಕ್ಕಾಗಿ ಎಲ್ಲವನ್ನು ಧ್ವಂಸ ಮಾಡುವುದಕ್ಕೆ ತಯಾರಾಗುತ್ತಾರೆ. ಒಟ್ಟಾರೆ ಮೂವರಲ್ಲಿ ಸೃಷ್ಟಿಯ ಆದಿ, ಸ್ಥಿತಿ, ಅಂತ್ಯದಂತೆ ಗುರುತಿಸಿಕೊಂಡಿದ್ದಾರೆ. ಇದಲ್ಲಕ್ಕೂ ಮಿಗಿಲಾದ ವಿಶ್ವ ಮಾನವ ಧರ್ಮ ಮುಖ್ಯ ಎಂದಾಗುತ್ತದೆ.

**೧೧. ಮುತ್ತು ಮುಳುಗು – ಪ್ರೋ ಎಲ್.ಬಸವರಾಜು:**

ಲೇಖಕರು ಬಿ.ಎ. ಓದುತ್ತಿರುವಾಗಲೇ ಗುರುಗಳಾಗಿದ್ದ ಎಲ್.ಬಸವರಾಜುರವರು ನನಗೆ ಪರ್ಲ್ ಡೈವರ್‌ನಂತೆ ಸಮುದ್ರದ ಆಳಕ್ಕೆ ಉಸಿರು ಬಿಗಿ ಹಿಡಿದು ಮುಳುಗಿ ಮುತ್ತುಗಳನನ್ನು ಕೈಲಿ ಹಿಡಿದು ಹೊರಬರುವವನಂತೆ ಅವರಿಗೆ ಅರಿವಾಯಿತು. ಒಟ್ಟಾರೆ ಒಂದು ಗ್ರಂಥದ ಸಮದ್ರದ ಒಳಗೆ ಮುಳಗದೆ ಅವರು ಲೌಕಿಕವಾಗಿ ಒಂಟಿಯಾದ ನೀರಿನಿಂದ ಹೊರ ತೆಗೆದ ಮೀನಿನಂತೆ ಚಡಪಡಿಸುತ್ತಿದ್ದರು. ಕಾರಣ ವಯಸ್ಸಿಗೆ ಬಂದ ಮಗ ಪ್ರಭು ತೀರ ಹೋದ ಮೇಲೆ ಜೀವನ ನಶ್ವರಯೆನಿಸುತ್ತದೆ.

**೧೨. ಗಾಯಿತ್ರಿ ಮಂತ್ರ:**

ಯು.ಆರ್.ಅನಂತಮೂರ್ತಿಯವರು ಉದಯ್ಮೋನಮುಖ ಬರಹಗಾರರು ಆದರೆ ಲಂಕೇಶರವರಿಂದ ನನಗೆ ಶಿಕ್ಷಣವಾಯಿತೆಂದು ಹಿರಿಮೆಯಿಂದ ಹೇಳಿಕೊಂಡಿದ್ದಾರೆ. ಯುವ ಜನರನ್ನು ರೂಪಿಸಿದರು. ಒಟ್ಟಿನಲ್ಲಿ ಕನ್ನಡ ಸಾಹಿತ್ಯದ ಸವತಿಯರೆಂದು ಚುಡಾಯಿಸುತ್ತಿದ್ದೇವು. ಯು.ಆರ್.ಆನಂತಮೂರ್ತಿಯವರು ವಿವಾದತ್ಮಕವಾದ ಜಾತಿ ಬಹುತ್ವ, ಸೃಜನಶೀಲತೆಯನ್ನು ನಾನು ಗ್ರಹಿಸುತ್ತಿದ್ದು ಬಗೆಯನ್ನು ವಿವರಿಸುವ ಅವರು ಒಂದು ಸಂದರ್ಶನದಲ್ಲಿ ಮೀಸಲಾತಿಬೇಕು. ಅದು ಸಮುದ್ರದಲ್ಲಿ ಮೀನು ಹಿಡಿದಂತೆ ಅನಿಸುತ್ತದೆ ಎಂದು ನಿಜವಾದ ಸಮರ್ಥನೆಯನ್ನು ನೀಡುತ್ತಾರೆ. ಅದಲ್ಲದೇ ಮಡಿಬಟ್ಟೆ–ಮೈಲಿಗೆಯಾಯಿತು ಹಾಗಾಗೀ ಲೇಖಕನಾದೆ. ಈ ಮಾತು ಮೊಟ್ಟೆ ಹೊಡೆದು ಮರಿ ಬಂದಂತಹ ಹಿನ್ನಲೆಯನ್ನು ತೋರಿಸುತ್ತದೆ. ಒಟ್ಟಾರೆ ಗಾಯಿತ್ರಿ ಮಂತ್ರದಂತೆ ಜನರಿಗೆ ಮಾತಿನಲ್ಲೇ ತಿಳಿಸುತ್ತಿದ್ದರು.

## ೧೩. ಬ್ರಾಹ್ಮಣರ ಬಹಿರಂಗ ಸಭೆಯ ಅಂತರಂಗದಲ್ಲಿ ಕೆಲ ಕಾಲ:

ಕುವೆಂಪುರವರ ಪ್ರತಿಭಟನಾ ಸಭೆಯಲ್ಲಿ-ಶ್ರೀ ಅಲನಕೃಷ್ಣ ಮತ್ತು ಲೇಖಕರು ಹೋದಂತಹ ಸಂದರ್ಭದಲ್ಲಿ ಕುವೆಂಪು ನಾನು ಹಿಂದೂ ಅಲ್ಲ ಮತ್ತು ಹಿಂದೂ ಧರ್ಮದಂತಹ ಅನಿಷ್ಠ ಧರ್ಮ ಇನ್ನೊಂದಿಲ್ಲ. ಹಿಂದೂ ಧರ್ಮವನ್ನು ಅನಿತ್ಯವೂ ಕನಿಷ್ಠವೋ ಅಂದುದಕ್ಕೆ ಈ ಬ್ರಾಹ್ಮಣ ತಮ್ಮ ಅಸ್ತಿತ್ವದ ಬುಡಕ್ಕೆ ಕೊಡಲಿ ಪೆಟ್ಟು ಬಿದ್ದಂತಾಗಿ ಆಡುತ್ತಿದ್ದರು. ಜೊತೆಗೆ ವೇದ, ಪುರಾಣ, ಪರಂಪರಾಗತವಾದ ಆ ತಲೆ ತಲಾಂತರದಿಂದಲೂ ಅಕ್ಷರ ಪಠಣ ಕಸುಬಿನ ಈ ಜನರ ಮೌಢ್ಯ, ಗೊಡ್ಡು ಅವಿವೇಕ ಎಂದರು. ಕೊನೆಗೆ ಸಭೆಯಲ್ಲಿದ್ದ ಜನರು ಕುವೆಂಪುರವರಿಗೆ ಅರಳು ಮರಳಾಗಿದೆಯೆಂತಲೂ ಬ್ರಾಹ್ಮಣ ದ್ವೇಷಿಯಾಗಿ ಕಾಣುತ್ತಿರಲಿಲ್ಲ. ಬಂದುದು ಅರೆ ಜ್ಞಾನಪೀಠ ಪ್ರಶಸಿಯೂ ಆಗುತ್ತಿರಲಿಲ್ಲ. ಆದರೆ ಕಾಣುವ ಕಣ್ಣು ಕಾಣದಾಗಿತ್ತು ಎನ್ನುವಂತೆ ಅನಿಸಿತು. ಆದರೂ ಅವರಿಗೆ ಯಾರ ಬಗ್ಗೆ ದ್ವೇಷ ಇಲ್ಲ. ಆದರೆ ನಮ್ಮಲ್ಲಿನ ಈ ಮೇಲು-ಕೀಳು, ಜಾತಿ-ಬೇದ, ಮಡಿ-ಮೈಲಿಗೆ, ಮತ-ಮೌಢ್ಯದ ಬಗ್ಗೆ ಅಕ್ರೋಶ ಇತ್ತು. ಅವರ ಮನಸ್ಸು ಸದಾ ಸಮಾನತೆಯ ಕಡೆಗೆ ಇರುತ್ತಿತ್ತು.

ನಿಜವಾದ ಬ್ರಾಹ್ಮಣ ಜಾತಿ ಅರ್ಥ ಏನು ಗೊತ್ತೆ ಎಂದಾಗ ಬ್ರಾಹ್ಮಣ ಎಂದರೆ ಒಳ್ಳೆಯ ನಡೆನುಡಿ, ಅಚಾರ, ಸಂಸ್ಕೃತ ಇರುವನು. ಇತರರಿಗೆ ಕೆಟ್ಟದನ್ನು ಬಯಸದವನು, ಸಮಾಧಾನ ಚಿತ್ತನೂ ಇತರರಿಗೆ ಜೀವಿಸುವವನು ಎಂದು ಹೇಳಿದರು. ಇದರಿಂದ ನೀವೇನೂ ಮಾಡುತ್ತಿದ್ದೀರಿ. ಇಂದೂ ಸಮಾಜದಲ್ಲಿ ಜನರನ್ನು ನೋಯಿಸಿ, ನಿಕೃಷ್ಟಗೊಳಿಸಿ, ಪಾಪಿಗಳಾಗಿದ್ದೀರಿ. ಸದಾ ಮೇಲು ಕೀಳು ಮಡಿ ಮೈಲಿಗೆಯಲ್ಲಿ ಜನರನ್ನು ಶೋಷಣೆಗೊಳಿಸುತ್ತಿದ್ದೀರಿ. ಇನ್ನುಮೇಲೆ ಇದಾಗದೆ ಪರಿವರ್ತನೆಯಾಗ ಬೇಕೆಂದರು.

## ೧೪. ದಲಿತ ನೌಕರರ ಜೊತೆ ಪಿಸು ಮಾತು:

ದಲಿತರು ತನಗೆ ಏನಾದರೂ ಅನ್ಯಾಯ ಕಷ್ಟ ಬಂದಾಗ ಅದು ಇಡೀ ದಲಿತ ಸಮುದಾಯಕ್ಕೆ ಅದ ಅನ್ಯಾಯ ಕಷ್ಟವೆಂದೂ ಭಾವಿಸಿ ಗೋಳಾಡುತ್ತಾನೆ. ಇದರಿಂದ ದಲಿತ ಸಮುದಾಯವು ಒಂದು ಕುಟುಂಬವಾಗಿತ್ತು, ಇತ್ತೀಚಿಗೆ ದಲಿತರು ಬೌದ್ಧ ಧರ್ಮಕ್ಕೆ ಮತಾಂತರವಾಗುತ್ತಿದ್ದಾರೆ. ಹಿಂದೂ ಧರ್ಮದ ಸಮಾಜ್ಯೋತ್ಸವದ ಬಗ್ಗೆ ಸ್ವಾಮೀಜಿಗಳು ಅರಿವು ನೀಡುತ್ತಾರೆ. ಅವರಲ್ಲಿ ಪೇಜಾವರ ಸ್ವಾಮೀಜಿ, ರಾಮಕೃಷ್ಣಾಶ್ರಮದ ಸ್ವಾಮೀಜಿ, ಶ್ರೀ ರವಿಶಂಕರ, ಆದಿಚುಂಚನಗಿರಿ ಸ್ವಾಮೀಜಿಗಳು, ಅಧಿಕಾರಕ್ಕಾಗಿ ಹಣಕ್ಕಾಗಿ ಧರ್ಮ ದೇವರು ಬಳಸಿ ಪಾಪಿಷ್ಠರಾಗಬೇಡಿ ಎನ್ನುವವರೇ ತಾವೇ ಅದನ್ನು ನಿಕೃಷ್ಠವಾಗಿ ಕಂಡರೂ ದಲಿತರನ್ನು ಹಿಂದೂ ಧರ್ಮದ ಒಳಗೆ ಜೀವ ತೆಗೆದು ಹೆಣ ಮಾಡಿ ಚಟ್ಟದಲ್ಲಿ ಅಲಂಕೃತ ಮಾಡಿ ಹೊತ್ತು ಹೊರಟು ಮೆರವಣಿಗೆ ಅನಿಸಿದೆ. ದಲಿತರಿಗೆ ಪಿಸು ಮಾತು ಎಂದರೆ ದಲಿತರು ಬುದ್ದನನ್ನು ಮುಟ್ಟುತ್ತಿದ್ದಾರೆ. ಯಾವ ಕಾರಣಕ್ಕೂ ಅಧಿಕಾರಕ್ಕೂ ಹಣಕ್ಕಾಗಿ ಬುದ್ದನನ್ನು ಬ್ರಾಹ್ಮಣರಂತೆ ದುರುಪಯೋಗ ಮಾಡಬೇಡಿ ಸದಾ ಎಚ್ಚರಿಕೆ ಇರಲಿ. ರಾಮನ ಸಾಯಿಸಿದ ಗತಿ ಬುದ್ದನಿಗೆ ಬಾರದಿರಲಿ. ಧರ್ಮ ಬೀದಿಗೆ ಬೀಳದಿರಲಿ. ಅಂತರಂಗದೊಳಗೆ ವಾಸಿಸಲು ಜೊತೆಗೆ ನಮಗೆ ತಿಳಿದಿರಲಿ ಎಂದಿದ್ದಾರೆ.

**೧೫. ಭಾರತ ಸಂವಿಧಾನಕ್ಕೆ ಭೂತ ಚೇಷ್ಟೆ:**

ಭಾರತದ ಸಂವಿಧಾನಕ್ಕೆ ೬೦ ವರ್ಷಗಳು ಇತಿಹಾಸವಿದೆ. ಹಾಗೆಯೇ ಸಾವಿರಾರು ವರ್ಷಗಳಿಂದ ಬಂದಂತಹ ಅಲಿಖಿತ ಸಂವಿಧಾನವೂ ಇದೆ. ಇದು ಭಾರತದ ಶ್ರೇಣಿಕೃತ ವ್ಯವಸ್ಥೆಯ ಸರ್ವಣಿಯರಲ್ಲಿನ ಸುಪ್ತಪ್ರಜ್ಞೆಯ ಅಳದಲ್ಲಿದೆ. ಇದು ಭೂತಕಾಲದ ಸಂವಿಧಾನ.

ಸಾವಿರಾರು ವರ್ಷಗಳಿಂದ ಸ್ಥಗಿತಗೊಂಡ ಸಾಮಾಜಿಕ ಪದ್ದತಿಯೇ ಹಿಂದೂ ಧರ್ಮವಾಗಿದೆ. ಶ್ರೇಣಿಕೃತ ವ್ಯವಸ್ಥೆಯ ಸಮಾಜಕ್ಕಾಗಿ ಇರುವ ಕಟ್ಟಾಳೆಗಳೇ ಹಿಂದೂ ಧರ್ಮವಾಗಿದೆ. ಇಂತಹ ಧರ್ಮಗಳು ಸಾವಿರಾರು ವರ್ಷಗಳಿಂದ ಧರ್ಮದ ವೇಷ ಧರಿಸಿ ಜನರನ್ನು ವಂಚಿಸಿ ಭಯಪಡಿಸಿ ದೇವರನ್ನು ಅವತರಿಸಿದೆ. ಅದರಿಂದ ಯಾವ ರಾಜ ಬಂದರೂ 'ರಾಜಧರ್ಮ'– ಎಂದರೆ ವರ್ಣ ವ್ಯವಸ್ಥೆಯನ್ನು ಕಾಪಾಡುವುದು. ಆಧುನಿಕ ಸಂವಿಧಾನದಲ್ಲಿ ವಿದ್ಯೆ ಎಲ್ಲರಿಗೂ ಕಡ್ಡಾಯವಾಗಿದೆ. ವಯಸ್ಕರ ಮತದಾನ ಪದ್ದತಿ, ಭೂ ಸುಧಾರಣೆ, ಮೀಸಲಾತಿ ಮುಂತಾದ ಸಮಾನತೆ ಹಕ್ಕುಗಳನ್ನು ನೀಡಲಾಗಿದೆ. ಇದರಿಂದ ದೇವರಿಗೆ ಒಂದು ದೈವಗ್ರಂಥವೆಂದರೆ ಅದು ಅಂಬೇಡ್ಕರ್ ಸಂವಿಧಾನವಾಗಿದೆ.

**೧೬. ಸಮಾನತೆಯ ಕನಸು ಮತ್ತೆ ಕಾಣುತ್ತಾ:**

ಸಮಾನತೆ ಎಂದರೆ ಬಡವ–ಬಲ್ಲಿದರೆಂಬ ತಾರತಮ್ಯವಿದೆ. ಮೇಲು ಕೀಳೆಂಬ ರೋಗವಿದೆ. ಈಗಿರುವಾಗ ಸಮೀಪದಲ್ಲಿ ಆಸಮಾನತೆಯಿದೆ. ಉದಾ : ಮುಂಬಯಿಯಲ್ಲಿನ ಮುಖೇಶ ಅಂಬಾನಿಯವರ ಮನೆ ೨೭ ಅಂತಸ್ತಿನ ಮನೆ ಮೂರು ಹೆಲಿಪ್ಯಾಡ್ ಒಂಬತ್ತು ಲಿಫ್ಟ್‌ಗಳು, ತೂಗು ಉದ್ಯಾನ, ಡಾನ್ಸ್ ರೂಮು, ೬೦೦ ಸೇವಕರು ಈ ಮನೆಯ ಸುತ್ತು ಸಾವಿರಾರು ಸ್ಲಂ ಜೋಪಡಿಗಳಿವೆ. ಇದು ಸಮಾನತೆಯ ಭಾರತವೇ ಇನ್ನೂ ಬಳ್ಳಾರಿಗೆ ಬಂದರೆ ಸಾರ್ವಜನಿಕ ಆಸ್ತಿಯಾಗಬೇಕಾದ ಸಂಪತ್ತು ಕೆಲವೆ ವ್ಯಕ್ತಿಗಳಿಂದ ಲೂಟಿ ಮಾಡಿ ಆದಿರು ತೋಡಿ ಪಾತಳ ಮಾಡಿ ಹಳ್ಳಿಗಳಲ್ಲಿ ಗಾಳಿಯೂ ಕೆಂಪು ನೀರು ಕೆಂಪು ಇದು ಭಾರತವೂ ಆಗಿದೆ.

"ಇಂದು ನಗರ ಉಸಿರಾಡಲು ಕಷ್ಟಪಡುತ್ತಿದೆ. ಹಳ್ಳಿ ನಡೆದಾಡಲು ತ್ರಾಣವಿಲ್ಲದೆ ಕಷ್ಟಪಡುತ್ತಿದೆ. ಅನ್ನ ನೀಡುವ ಅನ್ನದಾತ ಆತ್ಮಹತ್ಯೆ ಮಾಡಿಕೊಳ್ಳುತ್ತಿದ್ದಾನೆ".[೧೭] ಈಗ ಎಲ್ಲರಿಗೂ ಉಳಿಯಲು ಇರುವ ಒಂದೇ ದಾರಿಯೆಂದರೆ ಅದು ಸಮಾನತೆ ಮಾತ್ರ. ಸಂಪತ್ತಿನ ವಿಕೇಂದ್ರೀಕರಣ, ಎಲ್ಲರಿಗೂ ಉದ್ಯೋಗ, ಸ್ವಾವಲಂಬನೆಯನ್ನು ತರುವುದು. ಸಮಾನ ಶಿಕ್ಷಣದ ಮೂಲಕ ಪಠ್ಯ ರಚಿಸಿ ಸಂವಿಧಾನದ ಆಶಯಗಳಿಗೆ ತಕ್ಕಂತೆ ಬದುಕನ್ನು ಬದಕಲು ಬಿಟ್ಟಾಗ ನಾಳಿನ ಭಾರತ ಸುಭದ್ರವೆನಿಸುತ್ತದೆ'.

---

[17] ಪ್ರಜಾವಾಣಿ – ಮೇ – ೧ – ೨೦೧೨ ಪುಟ – ೦೪

ಪರಂಪರೆಯಿಂದ ಸಮಾಜದಲ್ಲಿನ ಶ್ರೇಣೀಕೃತ ವ್ಯವಸ್ಥೆಯಿಂದ ಅಧಿಕಾರ, ಸಂಪತ್ತು, ಶಿಕ್ಷಣ ಕೇವಲ ಒಂದೇಒಂದು ವರ್ಗಕ್ಕೆ ಸೀಮಿತವಾಗಿದ್ದು, ಇದನ್ನು ಬೇರೆಯವರು ಪಡೆಯದ ಹಾಗೇ ನೋಡಿಕೊಂಡರು. ಹೇಗೆಂದರೆ, ದಲಿತರು ಶೂದ್ರರು ಇವರು ವೇದ, ಮಂತ್ರ, ಉಪನಿಷತ್‌ಗಳನ್ನು ಉಚ್ಚಾರಣೆ ಮಾಡಬಾರದು ಎಂದು ಹೇಳಿ ಸಂಪೂರ್ಣ ಆ ಜನರನ್ನು ಶಿಕ್ಷಣದಿಂದ ದೂರ ಮಾಡಿ ಕತ್ತಲೆಯಲ್ಲಿರಿಸಿಬಿಟ್ಟರು. ಹಾಗೆಯೇ ಧರ್ಮ ವ್ಯವಸ್ಥೆಯಲ್ಲಿ ಕೀಳುಕುಲದವರು ದೇವಾಲಯದ ಒಳಗೆ ಪ್ರವೇಶವಿಲ್ಲವೆಂಬ ಮಡಿ–ಮೈಲಿಗೆಯನ್ನು ತಂದರು, ಜೊತೆಗೆ ದೇವರ ಪ್ರತಿನಿಧಿಗಳಾಗಿರುವ ಸವರ್ಣಿಯರ ಸೇವೆಯನ್ನು ಮಾಡಿಕೊಂಡಿರಬೇಕೆಂದು ನಿಯಮ ರೂಪಿಸಿ ದೇವರಸೇವೆ, ದೇವದಾಸಿ, ಗುಲಾಮರನ್ನಾಗಿ ಮಾಡಿ ಜೀತದ ಪರಂಪರೆಯಲ್ಲಿ ಇನ್ನೂ ಬದುಕುವಂತೆ ಮಾಡಿದ್ದಾರೆ. ಅದರಿಂದ ಇವುಗಳಿಂದ ಮುಕ್ತಿಸಿಗಬೇಕಾದರೆ ಎಲ್ಲರಿಗೂ ಶಿಕ್ಷಣ, ಮೂಲಭೂತ ಸೌಕರ್ಯಗಳನ್ನು ಸರ್ಕಾರ ಒದಗಿಸುವುದು ಮುಖ್ಯ. ಈಗಾಗಲೇ, ಅನುಭವಿಸುತ್ತಿರುವ ಅಧಿಕಾರ, ಸಂಪತ್ತು ವಿಕೇಂದ್ರೀಕರಣವಾಗಿ ಎಲ್ಲರಿಗೂ ಹಂಚಿ, 'ಸರ್ವರಿಗೂ ಸಮಬಾಳು; ಸರ್ವರಿಗೂ ಸಮಪಾಲು' ಎಂಬ ನೀತಿ ಅಳವಡಿಸಿ, ಸಮಾನತೆಯ ಮಂತ್ರದಿಂದ ಸಮಾಜದಲ್ಲಿ ಮುಕ್ತಿಯನ್ನು ತರಲಿಕ್ಕೆ ಸಾಧ್ಯ. ಜೊತೆಗೆ ಶ್ರಮ ಅನ್ನುವುದು ಒಂದೇ ವರ್ಗಕ್ಕೆ ಸೀಮಿತವಾಗದೆ ಪ್ರತಿಯೊಬ್ಬರು ದುಡಿದು ತಿನ್ನಬೇಕು, ಕುಂತು ಉಣ್ಣುವನಿಗೆ ಅರಿವು ಮೂಡಿಸಬೇಕು. ಹಾಗೆಯೇ ದುಡಿಯುವ ರೈತನಿಗಿಂತ ಮಧ್ಯವರ್ತಿ, ದಲ್ಲಾಳಿಗಳೇ ಹೆಚ್ಚು ಲಾಭ ಪಡೆಯುವ ವ್ಯವಸ್ಥೆ ಬದಲಾಗಿ, ದೌರ್ಜನ್ಯದಿಂದ ಮುಕ್ತಿಗೊಳಿಸಲಿ ಹಾಗೂ ಬೆಲೆ–ಬೇಡಿಕೆಯ ನಿಯಮಕ್ಕೆ ತಕ್ಕಂತೆ–ಬಡವರಿಗೂ ಬದುಕಲು ಅವಕಾಶ ಮಾಡಿಕೊಡಬೇಕು. ಉದಾ: ಬೆಂಗಳೂರಿನಲ್ಲಿ ಬದುಕು ಸಾಗಿಸುವುದೇ ಒಂದು ಹರಸಾಹಸ. ಬೆಲೆಗಳು ಗಗನಕ್ಕೇರಿ, ಬದುಕಲು ಸಾಧ್ಯವಾಗದೇ ಉಸಿರುಗಟ್ಟಿಸಿ, ಜಾಗತೀಕರಣ, ನಗರೀಕರಣ, ಉದಾರೀಕರಣಗಳು ಸಾಯಿಸುತ್ತಿವೆ.

ಹಳ್ಳಿಗಳಲ್ಲಿ ಜನತೆ ಕ್ಷಾಮ, ಬರಗಾಲ, ಜಲಕ್ಷಾಮ, ರೋಗಪೀಡಿತ ವ್ಯವಸ್ಥೆಯಿಂದ ಬಳಲಿ, ತಿನ್ನಲಿಕೆ ಅನ್ನವಿಲ್ಲದೆ, ನಿರುದ್ಯೋಗದಿಂದ ಕೈಕಟ್ಟಿಕುಳಿತುಕೊಳ್ಳಲು ಕಾರಣ ಇವತ್ತಿನ ಜಾಗತೀಕರಣದ ಪರಿಣಾಮ. ಬೆಳೆ ನೀಡುವ ಭೂಮಿಯನ್ನು ಕೈಗಾರಿಕೆಗಳನ್ನು ಮಾಡಲು ಹೊರಟ ನೀತಿಗೆಟ್ಟ ಸರ್ಕಾರಗಳು ಇನ್ನೊಂದುಕಡೆ. ರೈತ ತಾನು ಬೆಳೆದ ಬೆಳೆಗೆ ಸರಿಯಾದ ಬೆಲೆ ಸಿಗದೆ ಸಾಲದ ಬಾಧೆಯಿಂದ ಆತ್ಮಹತ್ಯೆ ಮಾಡಿಕೊಳ್ಳುವ ಸ್ಥಿತಿ ತಲುಪಿದ್ದಾನೆ. ಒಂದುಕಾಲದಲ್ಲಿ ಅನ್ನ ಕೊಡುವ ಅನ್ನದಾತ ಇಂದು ಭಿಕ್ಷುಕನಾಗಿ ಪಟ್ಟಣ ಸೇರಿ ಅನಾಥನಾಗುವ ಸ್ಥಿತಿ ಬಂದಿದೆ.

ಇನ್ನೊಂದು ಕಡೆ ಶಿಕ್ಷಣದಲ್ಲಿ ಸಮಾನತೆಯಿಲ್ಲದೆ ತಾರತಮ್ಯವೆಸಗುವ ಪಠ್ಯಕ್ರಮಗಳ ನೀತಿಗೆ ಕಾರಣ ಖಾಸಗೀಕರಣ. ಶಿಕ್ಷಣದ ವ್ಯಾಪಾರೀಕರಣದಿಂದಾಗಿ ಬಡವರಿಗೆ ಸರಿಯಾದ ಶಿಕ್ಷಣ ದೊರೆಯಲು ಸಾಧ್ಯವಾಗದೇ ಅವರು ಶಿಕ್ಷಣದಿಂದ ವಂಚಿತರಾಗಿದ್ದಾರೆ.

ಶ್ರೀಮಂತವರ್ಗ ಶಿಕ್ಷಣ ಕ್ಷೇತ್ರವನ್ನು ಆವರಿಸಿಕೊಂಡು ಉದ್ಯೋಗ, ಉನ್ನತ ಅಧಿಕಾರವನ್ನು ಮತ್ತೆ ತನ್ನದಾಗಿಸಿಕೊಳ್ಳುತ್ತಿದೆ. ಇದರಿಂದ ಎಲ್ಲರಿಗೂ ಒಂದೇ ರೀತಿಯ ಶಿಕ್ಷಣ ಕ್ರಮ ಜಾರಿಗೆ ತರುವುದು ಸೂಕ್ತ. ಜೊತೆಗೆ ಕಡ್ಡಾಯವಾಗಿ ಕನ್ನಡ ಭಾಷೆಯನ್ನು ಎಲ್ಲರಿಗೂ ಕಲಿಸುವುದು, ರಾಜ್ಯದ ಆಡಳಿತವೂ ಸಹ ಕನ್ನಡ ಭಾಷೆಯಲ್ಲಿಯೇ ನಡೆಸುವುದು ರಾಜ್ಯದ ಹಿತದೃಷ್ಟಿಯಿಂದ ಒಳ್ಳೆಯದು.

# ಅಧ್ಯಾಯ ೩.೫

## ಭಾಷಿಕ ಮತ್ತು ಸಾಹಿತ್ಯ

### ೧. ಕನ್ನಡಕ್ಕೊಂದು ರಾಷ್ಟ್ರೀಯತೆ:

ದಲಿತರಿಗೇನೆ ಒಂದು ರಾಜ್ಯ ಕೊಟ್ಟರೂ ಅದರಲ್ಲೂ ಎಡಗೈ ಮತ್ತು ಬಲಗೈಗಳೆಂಬ ಭಿನ್ನತೆ ಇವೆ. ಅದರಂತೆ ಪ್ರಾಂತ್ಯಕನುಗುಣವಾಗಿ ಬಣ್ಣ, ಭಾಷೆ, ಜಾತಿಮತ, ಹೆಣ್ಣು, ಗಂಡು ಎಂಬ ಭಿನ್ನತೆಯನ್ನು ಪೂರ್ವಿಕರಿಂದ ಪರಂಪರೆಯಾಗಿ ಪಡೆದಿದ್ದೇವೆ. ಪು.ತಿ.ನ.ರವರ ಹೇಳಿಕೆಯಂತೆ ಒಂದು ದೇಶ ಎಂದರೆ ಅಲ್ಲಿರುವ ಪ್ರದೇಶದಲ್ಲಿ ವಾಸಿಸುವ ಜನರ ಒಂದು ಮೊತ್ತವೇ ದೇಶ. ಒಂದು ಪ್ರದೇಶದಲ್ಲಿ ಮನುಷ್ಯರೇ ಇಲ್ಲದಿದ್ದಾರೆ ಅದು ದೇಶ ಅನ್ನಿಸಿಕೊಳ್ಳುವುದಿಲ್ಲ. ಆದರಿಂದ ಹೀಗೆ ರಾಜ್ಯ ಅಭಿವೃದ್ಧಿಯಾಗುವುದಕ್ಕೆ ಆ ರಾಜ್ಯದ ಜನತೆ ಭಾಷೆಯು ಮುಖ್ಯವಾಗುತ್ತದೆ. ಉದಾ: ಕರ್ನಾಟಕದಲ್ಲಿ ೨ ಕೋಟಿಗೊಂದು ರಾಜ್ಯ ಮಾಡುವುದಾದರೆ ಭಾಷೆ, ರಾಜ್ಯ ಅಭಿವೃದ್ದಿಯಾಗುತ್ತದೆ. ಅದು ರಾಷ್ಟ್ರೀಯತೆ ಎನಿಸಿಕೊಳ್ಳುತ್ತದೆ.

### ೨. ಇಂಗ್ಲಿಷ್‌ನೊಡನೆ ಗುದ್ದಾಟದಲ್ಲಿ:

ಪ್ರಸ್ತುತ ಈ ಲೇಖನದಲ್ಲಿ ಭಾಷೆಯಲ್ಲಿನ ತಾರತಮ್ಯತೆ ಮೇಲು ಕೀಳು ಜಾತಿಯಲ್ಲ ಭಾಷೆಯಲ್ಲೂ ಇದೆ ಎಂಬುದನ್ನು ವಿವರಿಸುತ್ತದೆ. ಜೊತೆಗೆ ಪ್ರತಿಯೊಬ್ಬರ ಮಕ್ಕಳು ಕನ್ನಡವನ್ನು ತಿರಸ್ಕರಿಸಿ ಇಂಗ್ಲೀಷ್ ವ್ಯಾಮೋಹಕ್ಕೆ ಗುರಿಯಾಗಿದ್ದಾರೆ. ಕೋರ್ಟುಗಳಲ್ಲೂ ಮಾತೃಭಾಷೆಯ ಹಿನ್ನಲೆಯಲ್ಲಿ ಸರ್ಕಾರಕ್ಕೆ ಹಿನ್ನಡೆಯೆನಿಸಿದೆ. ಸರ್ಕಾರಗಳು ಕಡ್ಡಾಯ ಕನ್ನಡ ಮಾತೃಭಾಷೆಯನ್ನು ಮಕ್ಕಳಿಗೆ ಹೇರಲು ಸಾಧ್ಯವಿಲ್ಲ ಪೋಷಕರ ಭಾಷೆಯೇ ಮಕ್ಕಳಿಗೂ ಕಡ್ಡಾಯ ಎನ್ನುವಂತಾಗಿದ್ದು ಕರ್ನಾಟಕದಲ್ಲೇ ಕನ್ನಡ ಆಸ್ವಿತ್ತ ಕಳೆದುಕೊಂಡಿದೆ. ಎಲ್ಲವೂ ಇಂದೂ ಕಂಗ್ಲೀಷ್ ಪ್ರಭಾವ ಹೆಚ್ಚಾಗಿದೆ. ಮಕ್ಕಳಲ್ಲೂ ಕನ್ನಡ ಓದಿದರೆ ವೃತ್ತಿಯೂ ಸಿಗುವುದಿಲ್ಲವೆಂಬ ಭರವಸೆಯಿಂದ ಎಲ್ಲರು ಇಂಗ್ಲೀಷ್‌ಮಯವಾಗಿದ್ದಾರೆ. ಶಿಕ್ಷಣದಲ್ಲಿ ಮಾತೃಭಾಷೆ ಪಂಚಮವರ್ಣ ಶಿಕ್ಷಣದಲ್ಲಿದೆ. ಆದರಿಂದ ಸರ್ಕಾರ ಇನ್ನು ಮುಂದೆ ಕನ್ನಡ ಮಾಧ್ಯಮದಲ್ಲೇ ಓದಿದವರಿಗೆ ಸರ್ಕಾರಿ ವೃತ್ತಿ ಕೊಡುತ್ತೇವೆ ಎಂಬ ಭರವಸೆ ಮೂಡಿಸುವುದರಿಂದ ಮತ್ತೇ ಕನ್ನಡ ತಲೆ ಎತ್ತಬಹುದು. ಆದರೆ ಇಂದು ಶಿಕ್ಷಣದಲ್ಲಿ ತಾರತಮ್ಯವಿದೆ. ಆ ಭಾಷೆ ಈ ಭಾಷೆ ಅನ್ನದೇ ಬಹುತೇಕ ಎಲ್ಲ ದೇಸಿಯ ಭಾಷಿಕರು ವಿದ್ಯಾಸಂಸ್ಥೆಗಳು ಹಳ್ಳಿ ದಿಲ್ಲಿ ಎನ್ನದೇ ಇಂಗ್ಲೀಷ್ ಮಾಧ್ಯಮಕ್ಕಾಗಿ ಗುದ್ದಾಟ ಹೋರಾಟ ನಡೆಯುತ್ತಿವೆ. ಕನ್ನಡ ಭಾಷೆ ಕಾಟಚಾರಕ್ಕೆ ಕಲಿಯುವ ಭಾಷೆಯಾಗಿ ಉಳಿದು ಬಿಡುವ ಒತ್ತಡ ಉಂಟಾಗಬಹುದು.

ಮಾತೃಭಾಷೆ ಶಿಕ್ಷಣದ ಬಗ್ಗೆ ನಿಜವಾದ ಮಾನ್ಯತೆ ಇಲ್ಲದಂತಾಗಿದೆ. ಸರ್ಕಾರವೂ ಈ ಕಡೆ ಪ್ರಾಥಮಿಕ ಶಿಕ್ಷಣ ಮಾಧ್ಯಮಕ್ಕೆ ಮಾತೃಭಾಷೆ ಎಂದು ತೋರಿಸಿ ಆ ಕಡೆ ಕೇಂದ್ರೀಯ ಪಠ್ಯದ ಇಂಗ್ಲೀಷ್ ಮಾಧ್ಯಮ ಶಾಲೆಗಳಿಗೆ ಆಭ್ಯಂತರವಿಲ್ಲ ಎಂದು ಅನುಮತಿ ನೀಡಿ ವಂಚಿಸುತ್ತಿದೆ. ಒಟ್ಟಾರೆ ಸರ್ಕಾರಗಳು ಖಾಸಗಿ ಶಾಲೆಗಳ ಕೈಗೊಂಬೆಗಳಾಗಿವೆ. ಇದರಿಂದ ಒಂದು ಕೈಲಿ ಕೊಟ್ಟು ಇನ್ನೊಂದು ಕೈಯಲ್ಲಿ ಕಿತ್ತುಕೊಳ್ಳುತ್ತೇವೆ.

ಆದರೂ ಕನ್ನಡಿಗರೇ ಕನ್ನಡ ಭಾಷೆಯ ಉಪಯೋಗವಿಲ್ಲವೆಂದೂ ಕೈ ಚೆಲ್ಲಿ ಕುಳಿತು ನಮ್ಮ ಮಕ್ಕಳನ್ನು ನಾವೇ ಕನ್ನಡ ಶಾಲೆಗೆ ಸೇರಿಸದೆ ಎಲ್ಲರು ಇಂಗ್ಲೀಷ್‌ಮಯವಾಗಿಸಿದ್ದೇವೆ.

**೩. ಮುಚ್ಚಿ ವಿಲೀನ ಎಂದರೆ ಕೊಂದು ಸ್ವರ್ಗಕ್ಕೆ ಕಳುಹಿಸಲಾಯಿತು ಎಂದಂತೆ:**

ಮಾತೃಭಾಷೆಯ ಸರ್ಕಾರಿ ಶಾಲೆಗಳು ಈಗಾಗಲೇ ಮೂರು ಸಾವಿರ ಶಾಲೆಗಳಲ್ಲಿ ಮಕ್ಕಳ ಪ್ರವೇಶವಿಲ್ಲದೇ ಬೇರೆ ಶಾಲೆಗಳೊಂದಿಗೆ ವಿಲೀನತೆಗೆ ಮುಂದಾಗಿರುವುದು. ಸರಕಾರ ತಾನೇ ಕೊಲೆ ಮಾಡಿ ಮತ್ತೇ ಸ್ವರ್ಗಕ್ಕೆ ಕಳುಹಿಸುವಂತೆ ನೆಡೆಸಿಕೊಳ್ಳುತ್ತಿದ್ದೆ. ಒಂದು ಶಾಲೆಗೆ ಕನಿಷ್ಠ ೧೨೦ ವಿದ್ಯಾರ್ಥಿಗಳ ಸಂಖ್ಯೆ ಇರಬೇಕೆಂಬುದು ಆದರೆ ಇದು ಸಾಧ್ಯವಾಗುತ್ತಿಲ್ಲ. ಏಕೆಂದರೆ ಕೆಲವು ಶಾಲೆಗಳಲ್ಲಿ ಕಡ್ಡಾಯವಾಗಿ ೧ನೇ ತರಗತಿಯಿಂದಲೇ ಇಂಗ್ಲೀಷ್ ಶಿಕ್ಷಣವನ್ನು ಕೊಡಲು ಮುಂದಾದರೆ ಇಂಗ್ಲೀಷ್ ಶಿಕ್ಷಕರಿಲ್ಲ. ಕೊನೆಗೆ ಮಕ್ಕಳಿಗೆ ಉಚಿತ ಊಟ, ಪುಸ್ತಕ, ಬಟ್ಟೆ, ಸೈಕಲ್. ವಿದ್ಯಾರ್ಥಿವೇತನ ಮುಂತಾದ ಸಹಾಯ ಮಾಡಿದರು. ಪ್ರವೇಶ ಮಾತ್ರ ಕಡಿಮೆ ಇದೆ. ಆದರೆ ಖಾಸಗೀ ಶಾಲೆಗಳಲ್ಲಿ ಶಿಕ್ಷಣದ ಗುಣಮಟ್ಟ ಉತ್ಕೃಷ್ಟವಾಗಿರುವುದರಿಂದ ಎಲ್ಲರೂ ಲಕ್ಷಾಂತರ ರೂ. ನೀಡಿ ಓದಿಸಲು ಮುಂದಾಗಿದ್ದಾರೆ. ಹೀಗೆಯೇ ಆದರೆ ಸಂಪೂರ್ಣ ಸರ್ಕಾರಿ ಶಾಲೆಗಳು ಮುಂದಿನ ಕಾಲದಲ್ಲಿ ಖಾಸಗೀಕರಣವೆನಿಸುತ್ತದೆ. ಆದರಿಂದ ಉಚಿತ, ಕಡ್ಡಾಯ ಶಿಕ್ಷಣಕ್ಕಾಗಿ ಮಕ್ಕಳ ಹಕ್ಕು ಕಾಯ್ದೆಯನ್ನು ಕೇಂದ್ರ ಸರ್ಕಾರ ಜಾರಿಗೆ ತಂದರೂ ಅದು ತಾರತಮ್ಯ ರೋಗಕ್ಕೆ ತುತ್ತಾದ ಭಾರತದಲ್ಲಿ ಏಕರೂಪ ಶಿಕ್ಷಣಕ್ಕಾಗಿ ಜನಾಂದೋಲನಕ್ಕಾಗಿ ಈ ನಾಡಿನ ಜನತೆ ಮುನ್ನುಗ್ಗಬೇಕು. ಇಲ್ಲದಿದ್ದರೆ ಮಾತೃಭೂಮಿ, ಮಾತೃಭಾಷೆ ಎಲ್ಲವನ್ನು ಕಳೆದುಕೊಳ್ಳುವುದು ಖಚಿತವೆನಿಸುತ್ತದೆ.



**೪. ಸರ್ಕಾರ ಕಣ್ಬಿಡಲಿ:**

ರಾಜ್ಯದಲ್ಲಿನ ಸರ್ಕಾರಿ ಶಾಲೆಗಳು ಈಗಾಗಲೇ ಮುಚ್ಚುತ್ತಿರುವಾಗ ಕೇಂದ್ರ ಸರ್ಕಾರದ ಶಿಕ್ಷಣ ಹಕ್ಕು ಕಾಯ್ದೆಯನ್ನು ಜಾರಿಗೆಗೊಳಿಸಿದೆ. ಇದರಿಂದ ಮಕ್ಕಳ ಸಂಖ್ಯೆ ಹೆಚ್ಚಿ ಶಿಕ್ಷಣದ ಪ್ರಾಮುಖ್ಯತೆಯಾಗಬೇಕು. ಆದರಿಂದ ಪ್ರತಿಯೊಂದು ಹಳ್ಳಿಗಳಲ್ಲಿ ಕಲಿಯುವ ಮಕ್ಕಳ ಸಂಖ್ಯೆ ಹೆಚ್ಚಬೇಕು. ಆದರೆ ೩೦೦೦ ಶಾಲೆಗಳು ಮುಚ್ಚುವ ಹಂತದಲ್ಲಿದ್ದು ವಿಲೀನಗೊಳ್ಳುವ ಸಂಭವದಲ್ಲಿದೆ ಮತ್ತೊಂದು ಕಡೆ ಲಕ್ಷಾಂತರ ಮಕ್ಕಳು ಚಿಂದಿ ಹಾಯುವ, ಪೇಪರ್ ಮಾರುವ ಸ್ಲಂ ಬೀದಿಯಲ್ಲಿನ ಮಕ್ಕಳು ಶಾಲೆಗೆ ಸೇರಬೇಕಿತ್ತು. ಆದರೆ ಆದ್ಯಾವುದು ಸರ್ಕಾರದ ಕಣ್ಣಿಗೆ ಬಿದ್ದಿಲ್ಲ. ಜೊತೆಗೆ ಅಲೆಮಾರಿ ಮಕ್ಕಳು ಆಶ್ರಮಗಳು, ಹಾಸ್ಟೆಲ್‌ಗಳು, ಮುಚ್ಚುವ ಹಂತ ತಲುಪಿವೆ. ಇನ್ನೊಂದು ಕಡೆ ೨೫% ಖಾಸಗಿ ಶಾಲೆಗಳಲ್ಲಿ ತನ್ನ ಸೀಟು ಭರ್ತಿ ಮಾಡಲು

ಒದ್ದಾಡುತ್ತಿದೆ. ಜೊತೆಗೆ ಹೊಸದಾಗಿ ೧೨೪೧ ಹೊಸ ಶಾಲೆಗಳನ್ನೂ ತೆರೆಯುವ ಹಂತದಲ್ಲಿರುವುದು. ವಿಪರಾಸ್ಯ ಆದರೆ ಖಾಸಗೀ ಒಡೆತನದ ಶಾಲೆಗಳಿಗೆ ಯಾವುದೇ ಕಟ್ಟುನಿಟ್ಟಿನ ಕ್ರಮ ಕೈಗೊಂಡಿಲ್ಲ. ಆದರಿಂದ ಇನ್ನು ಮುಂದೆ ಸರ್ಕಾರ ಕಣ್ಣ ಬಿಡಲೆಂಬುದು ಲೇಖನದ ತಾತ್ಪರ್ಯವಾಗಿದೆ.

**೫. ನೃಪತುಂಗ ಪ್ರಶಸ್ತಿ ಪಡೆಯಲೋಸುಗ:**

ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆಯು ನೃಪತುಂಗ ಸಾಹಿತ ಪ್ರಶಸ್ತಿಗೆ ದೇವನೂರು ಮಹಾದೇವರನ್ನು ಸಾಹಿತ್ಯ ಪರಿಷತ್ ಆಯ್ಕೆ ಮಾಡಿರುವುದಕ್ಕೆ ಕೃತಜ್ಞತೆ ಸಲ್ಲಿಸುತ್ತಾ ನನಗೆ ಪ್ರಶಸ್ತಿ ನೀಡುವುದಕ್ಕಿಂತ ಕಡ್ಡಾಯವಾಗಿ ಒಂದನೇ ತರಗತಿಯಿಂದ ಉನ್ನತ ಶಿಕ್ಷಣದವರೆಗೆ ಕನ್ನಡ ಮಾಧ್ಯಮದಲ್ಲೇ ಶಿಕ್ಷಣ ನೀಡುವ ಸರ್ಕಾರದ ನೀತಿಯನ್ನು ಹಂಬಲಿಸುತ್ತಾ ಹಾಗೆ ಕಣ್ಮುಚ್ಚಿದ ಕುವೆಂಪು, ಶಿವರಾಮಕಾರಂತರ ಕನಸಾಗಿದೆ. ಸಾಹಿತ್ಯ ಪರಿಷತ್ ಇನ್ನು ಮುಂದೆ ತಾನೂ ಸಮ್ಮೇಳನ ನಡೆಸುವುದಿಲ್ಲವೆಂದೂ ಹಠ ಹಿಡಿದರೆ ನಾನೇ ಬಂದು ಖುದ್ದಾಗಿ ಪ್ರಶಸ್ತಿ ಸ್ವೀಕರಿಸುತ್ತೇನೆ ಎಂದು ಪತ್ರದಲ್ಲಿ ತಿಳಿಸಿದ್ದಾರೆ. ಇದರಿಂದ ಭಾಷೆಯ ಬಗ್ಗೆ ಇರುವ ತಾರತಮ್ಯ ಸರಿಪಡಿಸಿ, ಕರ್ನಾಟಕದಲ್ಲಿ ಕನ್ನಡ ಕಡ್ಡಾಯವಾಗಿ ಬೆಳೆಯಲಿ ಎಂಬ ಆಶಯ ವ್ಯಕ್ತಪಡಿಸಿದ್ದಾರೆ.

**೬. ಹಿರಿಯ ವಿದ್ಯಾರ್ಥಿಗಳ ಬೀಳ್ಕೊಡುತ್ತಾ ಪಂಪನ ಜೊತೆ–**

ಕಿರಿಯ ವಿದ್ಯಾರ್ಥಿಗಳ ಹಿರಿಯ ವಿದ್ಯಾರ್ಥಿಗಳಿಗೆ ಬಿಳ್ಕೋಡುಗೆ ನೀಡುವ ಕಾರ್ಯಕ್ರಮದಲ್ಲಿ ಲೇಖಕರು ಕಿರಿಯ ವಿದ್ಯಾರ್ಥಿಯಾಗಿದ್ದರು ಎಂಬ ಅನಿಸಿಕೆಯೊಂದಿಗೆ ಪಂಪನ ವ್ಯಕ್ತಿತ್ವ ಪರಿಚಯಸುತ್ತ ಪಂಪನ ಕೃತಿಗಳಾದ ವಿಕ್ರಮಾರ್ಜುನ ವಿಜಯ ಹಾಗೂ ಆದಿಪುರಾಣದ ಕಥಾವಸ್ತುವಿನ ಪರಿಕಲ್ಪನೆಯೊಂದಿಗೆ ಪಂಪನ ಭಾಷೆ ಪುಲಿಗೆರೆ ಕನ್ನಡ ಭಾಷೆ ಅದು ಕನ್ನಡವನ್ನು ಜರಡಿಯಾಡಿಸಿ ಕಾಯಿಸಿ ಭಟ್ಟಿ ಇಳಿಸಿ ಅದರ ತಿರಳದನಿ ತೆಗೆದು ಆ ನುಡಿಗಟ್ಟಿನ ನಾಡಿ ಹಿಡಿದು ನಡೆಸುತ್ತಾನೆ. ಪಂಪ ಭಾರತದಲ್ಲಿ ಅರ್ಜುನ ಇಂದ್ರ ಲೋಕವನ್ನು ಯಾಗಕ್ಕಾಗಿ ದೋಚುತ್ತಾನೆ. ಆದರೆ ಇಂದ್ರಾಣಿ ಹತ್ತಿರ ಕನ್ನಡಿಯನ್ನು ಮಾತ್ರ ಅವಳ ಬಳಿಯೇ ಬಿಟ್ಟು ನಡೆಯುತ್ತಾನೆ. ಇದು ಗ್ರೀಕ್ ದುರಂತ ಕಥೆಯನ್ನು ವಿವರಿಸುತ್ತದೆ. ಇದಕ್ಕಿಂತ ಆದಿ ಪುರಾಣದ ಕಥಾವಸ್ತು ಜೈನಧರ್ಮದ ನೆಲೆಯನ್ನು ತಿಳಿಸುತ್ತಾ ಭರತ ಬಾಹುಬಲಿಯ ಪ್ರಸಂಗದಲ್ಲಿ ಭರತ–ಬಾಹುಬಲಿ ಬೇರೆ ಬೇರೆ ಅಲ್ಲ. ಬಾಹುಬಲಿಯ ಬಹಿರಂಗವೇ ಭರತ ಅನಿಸಿತು. ಭರತನ ಅಂತರಂಗವೇ ಬಾಹುಬಲಿ ಅನಿಸಿತು. ಇಬ್ಬರೂ ಒಂದಾದರೆ ವೃಷಭನಾಥನಂತೆ ಪರಿಪೂರ್ಣವಾಗುತ್ತಾರೆ. ಅದರೊಂದಿಗೆ ಕವಿಯು ಕಲಿಯೂ ಹೌದು ಕವಿಯೂ ಹೌದು ಎನ್ನುವಂತೆ ತನ್ನನ್ನೇ ತಾನೇ ಹೊಗಳಿಕೊಂಡಿದ್ದಾನೆ. ಅದರೂ ಪಂಪ ತನ್ನ ಜೀವಿತಾವಧಿಯಲ್ಲಿ ಪ್ರಸಿದ್ಧಿ ಪಡೆದಿರಲಾರನೆಂದು ನನಗನ್ನಿಸುತ್ತದೆ. ಜೊತೆಗೆ ಪಂಪನ ಕಾವ್ಯದಲ್ಲಿ ದೇಸಿಯ ರಾಜನ ಗಾಂಭೀರ್ಯ, ಘನತೆ ಪಡೆದಿದ್ದು ಪಂಪನ ದೇಸಿಯತೆಗೆ ಕಾರಣವಾಗಿದೆ.

ಒಟ್ಟಾರೆ ಲೇಖಕರು ಸಭೆಯಲ್ಲಿನ ಹಿರಿಯ ವಿದ್ಯಾರ್ಥಿಗಳಿಗೆ ಬೀಳ್ಕೊಡುಗೆ ಮಾಡುವಾಗ ನೀವೂ ನನ್ನಂತೆಯೇ ಕಿರಿಯ ವಿದ್ಯಾರ್ಥಿಯಾಗಿಯೇ ಉಳಿಯಿರಿ ಎಂದು ಹಾರೈಸಿದರು. ಇದರಿಂದ ವ್ಯಕ್ತಿ ಪರಿಪೂರ್ಣನಲ್ಲ ಅವನು ಕಲಿಯುವುದಕ್ಕೆ ಇನ್ನೂ ಇದೆ ಎನ್ನುವ ಅಪೂರ್ಣತೆಯನ್ನು ಪರಿಚಯಿಸುತ್ತದೆ.

**ಅಡಿ ಟಿಪ್ಪಣಿಗಳು:**

೧) ವಚನಗಳು – ಬಸವಣ್ಣ– ಕನ್ನಡ ಸಾಹಿತ್ಯ ಚರಿತ್ರೆ–ಹೆಚ್.ನಂಜೇಗೌಡರು ಪುಟ–೧೫೭

೨) ಮೀಸಲಾತಿ ವರ್ಗೀಕರಣ – ಸಿ.ಕೆ.ಮಹೇಶ್ – ಪುಟ – ೬೭

೩) ಪ್ರಜಾವಾಣಿ ಪತ್ರಿಕೆಯ – ವಾಚಕರವಾಣಿ – ಪುಟ – ೦೬ – ಏಪ್ರಿಲ್ ೧೪–೨೦೧೩

೪) ಯಾರ ಜಪ್ತಿಗೂ ಸಿಗದ ನವಿಲುಗಳು – ಪಿ.ಚಂದ್ರಿಕಾ – ಪುಟ – ೧೭೫

೫) ಧರ್ಮ ಮತ್ತು ವೈಚಾರಿಕತೆ – ಬಿ.ವಿ.ವೀರಭದ್ರಪ್ಪ – ಪುಟ – ೦೬

೬) ಅದೇ ಪುಟ – ೬೭

೮) ಸಮಾನತೆಯ ಕನಸನ್ನು ಮತ್ತೆ ಕಾಣುತ್ತ – ಕೆ.ಎನ್.ಶಾಂತಕುಮಾರ – ಪುಟ – ೧೪೨

೯) ಪ್ರಜಾವಾಣಿ ಪತ್ರಿಕೆ – ಮೇ – ೧ – ೨೦೧೨ – ಪುಟ – ೦೪

# ಅಧ್ಯಾಯ ೪

## ಕೃತಿಯ ವಿಶ್ಲೇಷಣೆ

'ಎದೆಗೆ ಬಿದ್ದ ಅಕ್ಷರ' ಮೌನದೊಡಲೊಳು ಮೂಡಿದಕ್ಷರ ಎನ್ನುವ ಈ ಕೃತಿಯಲ್ಲಿ ಇಂದಲ್ಲ ನಾಳೆ ಸಮಾಜಕ್ಕೆ ಫಲ ನೀಡುವ ವಿಚಾರಧಾರೆ ಇದೆ. ಇದರಲ್ಲಿ ಶಿಕ್ಷಣದ ಅರಿವು ಶಿಕ್ಷಣದ ಸ್ವರೂಪ ಮತ್ತು ಪರಿಣಾಮಗಳನ್ನು ತಿಳಿಸುತ್ತ ಸುಸಂಸ್ಕೃತ ಬದುಕಿನ ದಾರಿಯೆನಿಸಿದೆ. ಜೊತೆಗೆ ನಾಳೆ ಬದುಕಿ ಬಾಳ ಬೇಕಾದ ನಮ್ಮ ಎಳೆಯ ಮಕ್ಕಳಲಾದರೂ ಈ ಭಾವನೆಯನ್ನು ಬಿತ್ತ ಬೇಕಾಗಿದೆ ಹಾಗೀಗಿ ಇವತ್ತಿನ ಶಿಕ್ಷಣದಲ್ಲಿ ಭೇಧಬಾವ ತೊಡದು, ತಾರತಮ್ಯ ಹೋಗಲಾಡಿಸಿ. ಸಮಾನ ಶಿಕ್ಷಣ ಪದ್ದತಿಯ ಮೂಲಕ ಸಂವಿಧಾನ ಆಶಯಗಳಿಗೆ ಬದುಕು ಬೇಕು ಎನ್ನುವಂತಿದೆ ಕೃತಿಯ ಆಶಯ.

ದೇವನೂರರು ಎದೆಗೆ ಬಿದ್ದ ಅಕ್ಷರದಲ್ಲಿ ಒಟ್ಟು ಏಳು ವಿಭಿನ್ನವಾದ ತಲೆಬರಹಗಳ ಅಡಿಯಲ್ಲಿ ಲೇಖನಗಳಿವೆ ಸುಮಾರು ೪೦ ವರ್ಷಗಳ ಸಮಗ್ರ ಸಂಗ್ರಹವೆನಿಸಿ ಬಹುತೇಕ ಬರಹಗಳಲ್ಲಿ ಮಾನವೀಯ ತುಡಿತದಿಂದ ತುಂಬಿ ತುಳುಕುವ ಜೊತೆಗೆ ಮನಸ್ಸಿನ ಅಂತಃಕರಣಕ್ಕೆ ತಟ್ಟುವಂತಹ ಲೇಖನಗಳು. ಅಲಂಕಾರ ವಿಲ್ಲದೆ ಅರ್ಭಟವಿಲ್ಲದೆ ಹೀಗೆಯೇ ಸರಳ ಮೃದುವಾದ ಧೋರಣೆಯನ್ನು ಓದುಗನಿಗೆ ತಿಳಿಸುತ್ತಾ ಇದರೂಳಗಿನ ಮೋಸ, ಅನ್ಯಾಯ, ಶೋಷಣೆ, ದೌರ್ಜನ್ಯ, ಸಿಟ್ಟು ಆವೇಶ, ಆಸಹಾಯಕತೆ, ಆಕ್ರಮ, ಹಸಿವು, ಬಡತನ, ಅನಾಚಾರ, ದ್ವೇಷ, ಆಸೂಯೆಗಳೆಲ್ಲವನ್ನು ಸಹನೆಯಿಂದಲೇ ಹೇಳುವ ಸಮರ್ಥತೆ ದೇವನೂರರಲ್ಲಿ ಅಂತರ್ಗತವೆನಿಸಿದೆ.

'ಎದೆಗೆ ಬಿದ್ದ ಅಕ್ಷರ'ದಲ್ಲಿ ದೇವನೂರು ಮಹಾದೇವರವರು ಒಬ್ಬ ಮಾನವ ಶಾಸ್ತ್ರಜ್ಞರಾಗಿ ಸಮಾಜಶಾಸ್ತ್ರಜ್ಞರಾಗಿ, ಚಿಂತಕರಾಗಿ, ಸಾಮೂಹಿಕ ಜೀವನದ ಗ್ರಹಿಕೆವುಳ್ಳವರಾಗಿ, ರಾಜಕೀಯ ಮುತ್ಸದಿಯಾಗಿ, ಮಾನತವಾದಿಯಾಗಿ, ಬದುಕನ್ನು ಗ್ರಹಿಸಿದ್ದಾರೆ.

ಕೃತಿಯ ವಿಶ್ಲೇಷಣೆಯಲ್ಲಿ ಸಾಮಾಜಿಕ, ಧಾರ್ಮಿಕ, ರಾಜಕೀಯ ಸಾಂಸ್ಕೃತಿಕ ಮತ್ತು ಭಾಷಿಕ ಸಾಹಿತ್ಯಕ ಹಿನ್ನಲೆಯಲ್ಲಿ ವಿಶ್ಲೇಷಣೆ ಕೈಗೊಳ್ಳಲಾಗಿದೆ.

**ಸಾಮಾಜಿಕ ವಲಯದ ವಿಶ್ಲೇಷಣೆ:**

ಈ ಪುಸ್ತಕದಲ್ಲಿ ಮನವ ಕಾಡುತ್ತಿದೆ. ಒಳನೋಟ, ಮಂತಾದರ ಮೆದುಳೊಳಗೆ, ಹೀಗೆಮುಂದುವರಿದರೆ, ಮುತ್ತು ಮುಳುಗ, ಮತ್ತು ಇತರ, ಮುಖಾಮುಖಿ, ಹಾಗೂ ಸಮಾನತೆಯ ಕನಸ್ಸನ್ನು ಕಾಣುತ್ತಾ, ಎಂಬ ಏಳು ವಿಭಾಗಗಳಿವೆ. ಈ ವಿಭಾಗಗಳಲ್ಲಿನ ಬರಹಗಳು ನಿರೂಪಣ ಕ್ರಮದಲ್ಲಿ ಭಿನ್ನತೆಯಿದೆ. ಕೃತ್ತಿಯನ್ನು ಓದುತ್ತ ಹೋದಂತೆಲ್ಲ

ಸಾಮಾಜಿಕ ಪ್ರಜ್ಞೆ ಅರಿವಾಗುತ್ತದೆ. ಕೃತಿಯಲಿ ೨೮ ಸಾಮಾಜಿಕ ಲೇಖನಗಳಿದ್ದು ಅದರಲ್ಲಿ ಕೆಲವು ವೈಚಾರಿಕತೆಯನ್ನು ಮೀರಿ ಮನ ಕಲಕುವ ಭಾವುಕತೆಯಿದೆ. ಒಂದು ಚೌಕಟ್ಟಿಗೆ ಒಳಗಾಗದೆ ವಿಶಾಲ ಪ್ರವೃತ್ತಿಯಲ್ಲಿ ಚಿಂತಿಸಿದ್ದಾರೆ. ಮೊದಲಿಗೆ ಅವರು ದಿನ ಸವೆಯುತ್ತಿದೆ ಎನ್ನುವ ಲೇಖನದಲ್ಲಿ ದಿನ ಮುಗಿಯುವವ ಕೊನೆಯಲ್ಲಿ ಎಲ್ಲವೂ ಮುಗಿದ ಮೇಲೆ ಭಾವನೆ ಮೀರಿದ ಇಥಿಯೋಪಿಯದ ಮಕ್ಕಳು ಬರುತ್ತೇವೆ. ಕ್ಷಾಮದ ಬಿಳಿ ಹಲ್ಲುಗಳನ್ನು ತಿನ್ನುತ್ತೇವೆ. ಅವುಗಳು ನನ್ನನ್ನು ತಿನ್ನುತ್ತೇವೆ, ಕುಟುಂಬಗಳು, ಕ್ಷಾಮದಿಂದ ಅನುಭವಿಸುವ ಭಾವ ತೀವ್ರತೆಯನ್ನು ಅನುಭವಿಸಿದಂತೆ ತೋರುತ್ತದೆ. ಬಹುಪಾಲು ಲೇಖನಗಳಲ್ಲಿ ಮುಖ್ಯವಾಗಿ ಕೇವಲ ಮನುಷ್ಯನಾಗುವುದೆಂದರೆ, ಅಸ್ಪೃಶ್ಯನಾಗುವುದೆಂದರೆ, ಊರಿಗೆ ಯಾವ ಚಿಕಿತ್ಸೆ ಸಾಮಾಜಿಕ ಕಣ್ಣು ತೆರೆಸುವ ಕೆಲಸ, ಹೆಣ್ಣು ಜಾತಿ ದಲಿತ ಜಾತಿ, ಲೇಖನದಲ್ಲಿ ಹೆಣ್ಣು ಹಾಗೂ ದಲಿತರು ಯಾವತ್ತಿಗೂ ಬದಲಾದಗ ಸಂಘರ್ಷಕ್ಕೆ ಕೈ ಹಿಡಿದ ಕನ್ನಡಿಯಂತಿದೆ. ಹೆಣ್ಣು ಮಕ್ಕಳಲ್ಲಿ ಬದುಕಿನ ಭರವಸೆ ಮೂಡಿಸಿದ್ದಾರೆ. ಭಾರತದ ನಿರ್ಮಾಣ ಸಾಧ್ಯವಾಗುವುದು ದಲಿತರ ಹಾಗೂ ಹೆಣ್ಣು ಮಕ್ಕಳ ಮೇಲಿನ ಶೋಷಣೆ ಅಂತ್ಯಗೊಂಡು ಆನಂತರವೇ, ನಗರ ಜೀವನದ ಕನಸು ಮತ್ತು ಭ್ರಮೆಗಳಲ್ಲಿ ಮುಚ್ಚಿ ಹೋಗುತ್ತಿರುವ ಶೋಷಣೆಗಳತ್ತ ಗಮನ ಸೆಳೆದು ಉದ್ದಾರ ಸೂತ್ರದ ಕಡೆ ಗಮನ ಹರಿಸಿ ಎದೆಗೆ ಬಿದ್ದ ಅಕ್ಷರವೂ ಪ್ರೇರಿಪಿಸುತ್ತದೆ. ಪ್ರೇರಪಿಸುವಂತಾಗಬೇಕು. ಈ ಕಾರಣಕ್ಕೆ ಎಲ್ಲರೂ ಈ ಕೃತಿಯು ಓದಲೇಬೇಕು.

**ಸಾಮಾಜಿಕ ಆಹಿಂದ ಪರ ಚಿಂತನೆಯ ಸ್ವರೂಪದಂತಹ ವಿಚಾರಗಳಲ್ಲಿ–**

ಅಲ್ಪಸಂಖ್ಯಾತ ಹಿಂದುಳಿದ ದಲಿತ ಪರ ಚಿಂತನೆಯನ್ನು ದೇವನೂರರು ತಾತ್ವಿಕ ಮತ್ತು ಮಾನವೀಯ ನೆಲೆಯಲ್ಲಿ ಸವಿಸ್ತಾರವಾಗಿ ವಿವರಿಸಿದ್ದಾರೆ. ದಲಿತರು ಹಿಂದುಳಿದವರ ಅಭಿವೃದ್ಧಿಯಾಗಬೇಕೆನ್ನುವುದು. ಬಹಿರಂಗವಾಗಿ ಪ್ರಗತಿಪರವಾದದ್ದು ಆದರೆ. ಆಂತರಂಗದಲ್ಲಿ ಪ್ರಗತಿ ವಿರೋಧಿಯಾಗಿರುತ್ತದೆ ಎಂಬ ಅಂಶವನ್ನು ಎದೆಗೆ ಬಿದ್ದ ಅಕ್ಷರ ಕೃತಿಯು ಮುಖೇನ ತ್ರಿಳಿ ಹೇಳುತ್ತಿದ್ದಾರೆ. ಅಸ್ಪೃಶ್ಯತೆ, ಜಾತಿ, ಮತೀಯತೆಯ ಗಾಯ ನಂಜಾಗಿ, ಮಿದುಳುಗೇರಿ ಭಾರತ ಹುಚ್ಚಾಗಿದೆ. ಈ ಗಾಯದ ಹುಚ್ಚನೇ ಸಮಾಜದಲ್ಲಿ ಸಂಸ್ಕೃತಿ ಪರಂಪರೆ ಎಂದು ಬಿಂಬಸಲಾಗಿದೆ.

ಇನ್ನೊಂದು ರೀತಿಯಲ್ಲಿ ದೇವನೂರರು ಹೇಳುವಂತೆ ಬಸ್ಸು ರೈಲು ಎನ್ನುವ ಕಾರಣಕ್ಕಾಗಿ ಅಕ್ಕ ಪಕ್ಕ ಕೂತಿದ್ದೇವೆ. ಹೋಟೆಲ್ ಎನ್ನುವ ಕಾರಣಕ್ಕಾಗಿ ಸಹ ಬೋಜನ ಪಂಕ್ತಿಯಲಿ ಕುಳಿತಿದ್ದೇವೆ. ನೌಕರಿ ಎನ್ನುವ ಕಾರಣಕ್ಕಾಗಿ ಒಟ್ಟಾಗಿ ಓಡಾಡುತ್ತಿದ್ದೇವೆ. ಆದರೆ ನಿಜವಾದ ಬದಲಾವಣೆ ಪರಿವರ್ತನೆ ಸಾಧ್ಯವಿಲ್ಲ.

ಹೀಗೆಯೇ ಹಿಂದುಳಿದ ವರ್ಗಗಳ ಅಭಿವೃದ್ಧಿ ಯೋಜನೆಗಳ ಬಗ್ಗೆ ಮಾತನಾಡುವಾಗ ತಳಸಮುದಾಯಗಳ ಅಭಿವೃದ್ಧಿಯನ್ನು ಬಯಸುವಂತ 'ಮಂಡಲ್ ವರದಿ' ಪ್ರಸ್ತಾಪಿಸಿದ್ದಾಗಲೆಲ್ಲ ಬಾಬರಿ ಮಸೀದಿ ಧ್ವಂಸ ಪ್ರಕರಣ ರಾಮಮಂದಿರ ಪ್ರಶ್ನೆ ಭುಗಿಲೇಳುತ್ತದೆ.

ಇನ್ನು ಜೀತ ಪದ್ಧತಿಗಳನ್ನು ಬಿಡಿಸುವ ಸಂದರ್ಭದಲ್ಲಿ ಈ ಅನಿಷ್ಠ ಪದ್ಧತಿಯಿಂದ ದೂರ ಮಾಡಲು ಸರ್ಕಾರ ಸಂಘಸಂಸ್ಥೆಗಳು ಮುಂದಾಗಿ ರದ್ದುಪಡಿಸಿದ್ದರೂ ಸಹ ದಲಿತರು ಜೀತಮಾಡುವಾಗಲೂ ಕತ್ತಲೆಯಲ್ಲೇ ಇದ್ದರೂ ಜೀತ ಬಿಟ್ಟಾಗಲೂ ಕೆಲಸವಿಲ್ಲದೆ ಕತ್ತಲೆಯಲ್ಲೆ ಇದ್ದಾರೆ. ಪರ್ಯಾಯ ಉದ್ಯೋಗವಕಾಶಗಳು ಇಲ್ಲದಾಗಿವೆ. ಒಟ್ಟಾರೆ ನಮಗೆ ಬೇಕಾಗಿರುವುದು ಜಾತಿ ಮತಗಳ ಸಂಪ್ರದಾಯಗಳನ್ನು ಕಿತ್ತುಬಿಸಾಡಿ ಮಡಿ–ಮೈಲಿಗೆಯಿಂದ ದೂರನಿಂತು ವಿಶ್ವಮಾನವರಾದಾಗ ರಕ್ತಸಂಬಂಧ ಎಲ್ಲಿಯವರೆಗೆ ಅಂದರೆ ಹಳ್ಳೀಲಿ ಬೇರೆ ಬೇರೆ ಜಾತಿಯ ಗಂಡು ಹೆಣ್ಣಿಗೂ ಊರಿನವರೆಲ್ಲ ಸೇರಿ ಮದುವೆ ಮಾಡುವವರೆಗೆ ನಮಗೆ ಬಿಡುಗಡೆಯೇ ಇಲ್ಲ.

ಎಡ–ಬಲ ಪಂಥಗಳೆಲ್ಲರಲ್ಲೂ ಸೇರಿ ಐಕ್ಯತೆಯಿಂದ ಒಗಟ್ಟು ಇಲ್ಲದಿದ್ದರೆ ದಲಿತರಿಗೆ ವಿಮೋಚನೆ ಅಸಾಧ್ಯ ಎಂಬ ಚಿಂತನೆಯನ್ನು ನೀಡುತ್ತಿದ್ದಾರೆ. ಹೆಂಡ ಬಾಡನ್ನು ಕೇವಲ ಸಹಜ ಆಹಾರವೆಂಬಂತೆ ನೋಡದೆ ಅದನ್ನು ದಲಿತ ಸಮುದಾಯದ ಟ್ರೇಡ್ ಮಾರ್ಕ್ ಆಗಿ ಬಳಸುವುದರ ಕುರಿತು ಲೇಖಕರು ವಿವರಿಸಿದ್ದಾರೆ.

ದೇವನೂರರು ಸಾಮಾಜಿಕ ಸ್ಥಿತಿಯಲ್ಲಿನ ಕೋಪ, ತಾಪ, ಅವಮಾನ, ಆಕ್ರೋಶಗಳನ್ನೆಲ್ಲ ಗುಣಾತ್ಮಕಗೊಳಿಸಬೇಕಾಗಿದೆ. ಪ್ರತಿಕೃತಿ ದಹನ, ಬಂದ್, ಕರೆ, ಹೋರಾಟ, ಚಳುವಳಿ ಮುಷ್ಕರ ಇತ್ಯಾದಿ ಕೋಪ ಶಮನ, ಅಲ್ಪ ತೃಪ್ತಿಯನ್ನು ಕೈಬಿಟ್ಟು ಸಮಾನತೆ, ಪ್ರೀತಿ, ರಾಜಕೀಯ ಇಚ್ಚಾಶಕ್ತಿ ಹೆಚ್ಚಿಸಿಕೊಳ್ಳುವತ್ತ ನಡೆಯಬೇಕಾಗಿದೆ ಎಂಬ ಸಲಹೆಯನ್ನು ಕೃತಿಯು ನೀಡುವುದು ಇಲ್ಲಿ ಕಾಣಬಹುದು.

**ರಾಜಕೀಯ ವಿಶ್ಲೇಷಣೆ:**

ಕೃತಿಯಲ್ಲಿ ರಾಜಕೀಯ ವಿಶ್ಲೇಷಣೆ ಮತ್ತು ಚಿಂತನೆ ವಿಭಿನ್ನ ನಲೆಗಳಲ್ಲಿ ಅಭಿವ್ಯಕ್ತಗೊಂಡಿದೆ. ರಾಜಕಾರಣದಲ್ಲಿ ಆದರ್ಶ ಸಮಾಜಸೇವೆ ತಾತ್ವಿಕತೆ ಮಾಯವಾಗುತ್ತಿರುವ ಇಂದಿನ ದಿನಗಳಲ್ಲಿ ಪ್ರಜೆಗಳು ಆಯ್ಕೆ ಮಾಡಿದಂತಹ ಪ್ರತಿನಿಧಿಗಳು ಭ್ರಷ್ಟ ಸರಕುಗಳಾಗಿರುವ ಸನ್ನಿವೇಶ ಕುರಿತು ಚರ್ಚಿಸುತ್ತಾ ರಾಜಕೀಯ ವ್ಯಕ್ತಿಗಳಲ್ಲಿ ಇಂಗದ ಅಧಿಕಾರದ ದಾಹ ಮತ್ತು ಹಣದ ದಾಹದಿಂದ ಬಚಾವ್ ಆಗುವುದೇ ಇಂದಿನ ಸವಾಲಾಗಿದೆ. ರಾಜಕೀಯ ಪಕ್ಷಗಳು ಮಾಫಿಯಾದ ಮುಖವಾಡದಂತೆ ಆಗಿವೆ. ಈ ಮಾಫಿಯಾಗಳೇನ್ನಾದರೂ ರಾಜಕಾರಣಕ್ಕೆ ಬಂದರೆ ನಾಡು, ನುಡಿ, ಸಂಸ್ಕೃತಿ, ನೆಲ, ಜಲ ಸಂಪತ್ತು ಜೊತೆಗೆ ಚುನಾವಣೆ ವ್ಯವಸ್ಥೆ ಹಾಗೂ ಪ್ರಜಾಪ್ರಭುತ್ವ ಎಲ್ಲವನ್ನೂ ಬುಡಮೇಲು ಮಾಡುವ ಸಂಭವವಿದೆ ಎಂದು ಕೃತಿಯ ಮುಖಾಂತರ ನಿರೂಪಿಸಿರುತ್ತಾರೆ.

ರಾಜಕಾರಣದ ಪಕ್ಷಗಳಲ್ಲಿ ಯಾವುದು ಸೂಕ್ತವೆನ್ನುವ ಸಂದರ್ಭದಲ್ಲಿ, ಅಸಮಾನತೆ, ಜಾತಿಯ ಶ್ರೇಣಿಕೃತ ವ್ಯವಸ್ಥೆಯಂತಹ ತಾತ್ವಿಕಗೊಳಿಸುವ ಬಿ.ಜೆ.ಪಿ.ಯಂತಹ ಪಕ್ಷವನ್ನು

ಇವರು ವಿರೋಧಿಸುತ್ತಾರೆ. ಪ್ರಜ್ಞಾ ರಹಿತ ರಾಜಕೀಯ ಬೇಡ ಎನ್ನುವ ದೇವನೂರರು ನೀವು ಆನೆ ಮೇಲೆ ಪಾರ್ಲಿಮೆಂಟಿಗೆ ಹೋಗಿ ಆದರೆ ಪ್ರಜ್ಞಾಹೀನರಾಗಿ ಕತ್ತೆ ಮೇಲೆ ಕೂರಬೇಡಿ ಎಂದು ಬಿಎಸ್‌ಪಿಯನ್ನು ಎಚ್ಚರಿಸಿದ್ದಾರೆ. ಬಿಜೆಪಿಯೊಂದಿಗೆ ಬಿ.ಎಸ್.ಪಿ.ಯ ವಿಲೀನತೆಯೊಂದಿಗೆ ಅವರು ಬಿ.ಎಸ್.ಪಿ.ಯನ್ನು ಸೇರುವ ಮುನ್ನ ಯೋಚಿಸಿ ಎಂದಿದ್ದಾರೆ. ಜೊತೆಗೆ ಕರ್ನಾಟಕದ ರಾಜಕಾರಣದಲ್ಲಿ ಬಿ.ಜೆ.ಪಿ.ಯ ಆಪರೇಷನ್ ಕಮಲವನ್ನು ಉದಾಹರಿಸುತ್ತಾ ರಾಜಕಾರಣದಲ್ಲಿ ನೈತಿಕತೆ ಮರೆಯಾಗುತ್ತಿರುವುದನ್ನು ತಿಳಿಸುತ್ತಾ ರಾಜಕೀಯ ವ್ಯವಸ್ಥೆಯಲ್ಲಿ ಗೂಂಡಾಗಳು, ಕಳ್ಳರು, ಖದೀಮರು, ದಗಾಕೋರರು, ಮೋಸಗಾರರೇ, ಕೋಟಿ ಕೋಟಿ ಲೂಟಿ ಮಾಡಿ ಚುನಾವಣೆಯಲ್ಲಿ ಗೆದ್ದರು. ಸ್ವಲ್ಪ-ಸ್ವಲ್ಪವಾಗಿ ದೇಶ ಮಾರಿ ಬಿಡುವ ರಾಜಕಾರಣಿಗಳ ಮುಖವನ್ನು ಪರಿಚಯಿಸುತ್ತಾರೆ.

ಹಣದ ವ್ಯಾಮೋಹಕ್ಕೆ ಹೆತ್ತ ತಾಯಿಯನ್ನೇ ಕೊಲ್ಲುವಂತೆ- ಇಡೀ ದೇಶದ ಸಂಪನ್ಮೂಲ ಲೂಟಿ ಮಾಡುತ್ತಿದ್ದಾರೆ. ಆದರೆ ರಾಜಕೀಯ ವಲಯದಲ್ಲಿ ಲೋಹಿಯ ಎಂಬ ಸಿಂಹಸ್ವಪ್ನದಂತಹ ವ್ಯಕ್ತಿತ್ವ ರಾಜಕೀಯದಲ್ಲಿ ಅಜರಾಮರವಾಗಿದ್ದಾರೆ.

ಇನ್ನು ರಾಜ್ಯದ ರಾಜಕಾರಣಕ್ಕೆ ಬಂದಾಗ ಕಾಂಗ್ರೇಸ್, ಜೆ.ಡಿ.ಎಸ್. ಬಿಜೆಪಿ ಚುನಾಯಿತರು ಜನಸೇವಕರಲ್ಲ. ಬದಲಿಗೆ ಸ್ವಅಭಿವೃದ್ಧಿಗಾಗಿ ರಾಜ್ಯದ ಸಂಪತ್ತು ಲೂಟಿ ಹೊಡೆಯುವ ಭ್ರಷ್ಟಾಚಾರಿಗಳು ಎನ್ನುವ ಅರಿವಿನಿಂದ ಜನಪರ ಧ್ವನಿಯಾಗಿ ನಿಲ್ಲಬಲ್ಲ ಹೋರಾಟಗಾರರನ್ನು ವಿಧಾನಸಭೆಗೆ ಕಳುಹಿಸಬೇಕೆಂದು ದೇವನೂರು ಮಹಾದೇವ ತಿಳಿಯಬಯಸುತ್ತಾರೆ.

ಒಂದು ಕಡೆ ಸುದ್ದಿಗೋಷ್ಠಿಯಲ್ಲಿ ಮಾತನಾಡಿ ಚುನಾವಣೆ ಎದುರಿಸಿದ ಬಳಿಕ ಶಾಸಕರ ಆಸ್ತಿಯ ಪ್ರಮಾಣ ಕೋಟಿಗಳಾಗುತ್ತಿದೆ. ನಾಡಿನ ಅಭಿವೃದ್ಧಿ ಹೆಸರಿನಲ್ಲಿ ಜನರನ್ನು ಮರುಳಗೊಳಿಸಿ ಅಧಿಕಾರಕ್ಕೆ ಬರುವವರು ಜನವಿರೋಧಿ ನೀತಿ ಅನುಸರಿಸಿ ರಾಜ್ಯದ ಜನರ ಹಿತವನ್ನು ಬಹುರಾಷ್ಟ್ರೀಯ ಕಂಪನಿಗಳು ಮತ್ತು ವಿದೇಶಿಯರ ಕೈಗೆ ನೀಡುತ್ತಿದ್ದಾರೆಂದು ಟೀಕಿಸಿದ್ದಾರೆ.

ಸರ್ವೋದಯ ರಾಜಕೀಯ ಪಕ್ಷ ಕಟ್ಟುವ ನಿಟ್ಟಿನಲ್ಲಿ ಆದರೂ ಇವೆಲ್ಲದರ ನಡುವೆ ದೇವನೂರು ಪ್ರಯತ್ನಿಸುತ್ತಿದ್ದಾರೆ. ಮೂಲತಹ ಸಮಾಜವಾದಿ ಪಾರ್ಟಿಯನ್ನು ಅಂಬೇಡ್ಕರ್ ಅಧ್ಯಕ್ಷತೆಯಲ್ಲಿ ರಚಿಸಿ ಲೋಹಿಯವರು ಕಾರ್ಯದರ್ಶಿಯಾಗಿದ್ದರು ನಂತರ ಅಂಬೇಡ್ಕರ್ ನಿಧನದ ನಂತರ ಪಕ್ಷ ಅಷ್ಟಕ್ಕೆ ನಿಂತಿತು. ಸಮಾಜವಾದದ ಕೊನೆಯ ಕೊಂಡಿ ಕ್ರಿಷನ್ ಪಾಟ್ನಯಕ - ಸರ್ವೋದಯ ಪಕ್ಷ ಕಟ್ಟಿದರು. ಪ್ರಸ್ತುತ ದೇವನೂರ ಮಹಾದೇವ ಪ್ರಸ್ತುತ ಸರ್ವೋದಯ ಪಕ್ಷದ ಅಧ್ಯಕ್ಷರಾಗಿದ್ದಾರೆ. ಆದರಿಂದ ರಾಜಕಾರಣದಲ್ಲಿ ನೀರಿಗೆ ಇಳಿಯದಂತೆ ಕೇವಲ ಗ್ರಹಿಕೆಯ ಅನುಭವದ ಮೇಲೆ ರಾಜಕಾರಣ ಮಾಡುತ್ತಾರೆ".

**ರಾಜಕೀಯ ಚಿಂತನೆಯಲ್ಲಿ:** ಯಾವುದೇ ಚಿಂತಕನೂ ಪರಿಪೂರ್ಣನಲ್ಲ. ಯಾವುದೇ ಚಿಂತನೆಯೂ ಪೂರ್ಣವಿಲ್ಲ. ಅಂಬೇಡ್ಕರ್, ಗಾಂಧಿ, ಲೋಹಿಯ, ಮಾರ್ಕ್ಸ್-ಯಾರೇ ಆಗಿರಲಿ ಅವರ ನಡುವೆ ಸಾಮ್ಯ ಗುರುತಿಸುವ ಪ್ರವೃತ್ತಿ ಬೆಳೆಸಿಕೊಳ್ಳಬೇಕಾಗಿದೆ. ಎಲ್ಲರಲ್ಲೂ ಐಕ್ಯತೆಯ, ಸಮಾನತೆಯ ಒಳನೋಟದ ಕಣ್ಣು ನಮ್ಮದಾಗಬೇಕು.

ನಮ್ಮ ಕಾಲದ ಇತ್ತೀಚಿನ ರಾಜಕೀಯ ವಿದ್ಯಾಮಾನಗಳಲ್ಲಿ ಸರಿಯಾದ ಅರಿವು, ತಿಳುವಳಿಕೆ ಇಲ್ಲದೆ ಯದ್ವಾತದ್ವಾ ದುಡ್ಡನ್ನು ಸಂಪಾದಿಸುವ ಅತಂತ್ಯ ಸುಲಭದ ಹಾದಿ ರಾಜಕೀಯವೆಂದೂ, ಭಾವಿಸಿ ಎಲ್ಲರೂ ಕಳ್ಳದಾರಿ ಹಿಡಿದು ಚುನಾವಣೆ ನಿಲ್ಲುತ್ತಾರೆ. ಚುನಾವಣೆಯಲ್ಲಿ ಗೆದ್ದರೂ, ಏನೇ ಪ್ರಯತ್ನಪಟ್ಟರು ಸರ್ಕಾರಗಳು ಭ್ರಷ್ಟಾಚಾರ, ನಿರುದ್ಯೋಗ, ಜನಸಂಖ್ಯಾ ನಿಯಂತ್ರಣ, ಮುಂತಾದ ಸಮಸ್ಯೆಗಳಿಗೆ ಉತ್ತರವನ್ನು ಹುಡುಕಿಲ್ಲ ಹಾಗಾಗಿ ಈ ದೇಶ ರಾಜಕೀಯದಲ್ಲಿ ಹಿಂದುಳಿದಿದೆ. ಇದಕ್ಕೆ ಮೂಲ, ಅಧಿಕಾರ ಕೇಂದ್ರೀಕರಣ, ಜನಸಂಖ್ಯಾ ಸ್ಫೋಟ ಸಮಸ್ಯೆಯೇ ಮುಖ್ಯವಾಗಿದೆ.

**ಸಾಂಸ್ಕೃತಿಕ ವಿಶ್ಲೇಷಣೆ:**

ಮಹಾದೇವ ಹೊಸ ತಲೆ ಮಾರಿನ ಬರಹಗಾರರಿಗೆ ಒಂದು ಕಥನದ ಮಾದರಿಯನ್ನು ಕಲ್ಪಿಸಿಕೊಟ್ಟಿದ್ದಾರೆ. ಜೊತೆಗೆ ತಮ್ಮ ಕಥನದ ಬಗೆಯನ್ನು ಬದಲಾದ ಅಗತ್ಯಗಳಿಗೆ ಬೇಕಾದಂತೆ ಮರುರೂಪ ಕೊಟ್ಟು ತಮ್ಮ ಹೊಣೆಗಾರಿಕೆ ನಿಭಾಯಿಸಿದ್ದಾರೆ.

ಮನುಷ್ಯನ ಉಡಿಗೆ ತೊಡಿಗೆ, ಜೀವನದ ವಿಧಾನಗಳು, ಅಚಾರ ವಿಚಾರ, ಸಂಸ್ಕೃತಿಯ ಪ್ರತೀಕವೆನಿಸಿದೆ, ಇದರಿಂದ ಲೇಖಕರು ಆಧುನಿಕ ಬದುಕಿನ ಯಾಂತ್ರೀಕರಣ, ನಗರೀಕರಣ, ಖಾಸಗೀಕರಣದ ಸಂದರ್ಭದಲ್ಲಿ ಪರಂಪರೆಯು ಅಳಿದು ಹೋಗುವ ದಿಕ್ಕಿನೆಡೆಗೆ ಸಾಗಿ ಬಂದಿದೆ, ಇಂದಿನ ಮಾಂಸಹಾರದ ಸಂಸ್ಕೃತಿಯ ಬಗ್ಗೆ-ಗೋಹತ್ಯೆ ನಿಷೇಧ ಎಂದಾದರೆ ಮುಂದಿನ ಸರ್ಕಾರಗಳು ಸಸ್ಯಹಾರ ನಿಷೇಧ ಜಾರಿಗೆ ತರುವುದು ಸಾಧ್ಯವಿದೆ.

ಹಾಗೆಯೇ ಇಂದಿನ ಸಂಸ್ಕೃತಿಯಲ್ಲಿ ಯಾಂತ್ರಿಕತೆ, ಆಧುನಿಕತೆಯಿಂದ, ದೇಸಿಯತೆ ಹಾಳಾಗಿ ನೀರು ಕುಡಿಯಲು ಬಂದ ಕಾಗೆಯ ಉದಾಹರಣೆಯಂತೆ ಮಡಿಕೆ ಸಂಸ್ಕೃತಿ ಹಿಂದಿನ ಕಾಲದಲ್ಲಿದ್ದು ಇವತ್ತು ಎಲ್ಲ ಪ್ಲಾಸ್ಟಿಕ್ ಸಂಸ್ಕೃತಿಯಾಗಿದೆ. ಇದರೊಂದಿಗೆ ಪಾಶ್ಚತ್ಯರ ನಿಲುವೂ ಧೋರಣೆ ಮನೆ ಮಾಡಿರುವುದರಿಂದ ಇಂದೂ ಸಣ್ಣ ಗುಡಿ ಕೈಗಾರಿಕೆಗಳು ನಶಿಸಿ, ಎಲ್ಲವೂ ಪ್ಲಾಸ್ಟಿಕ್‌ಮಯವಾಗುತ್ತಾ, ಸಂಸ್ಕೃತಿ ಅಧಃಪತನಗೊಂಡಿದೆ. ಅಲ್ಲದೇ ಪ್ಲಾಸ್ಟಿಕ್‌ನಿಂದ ನಾನಾರೀತಿ ಮಹಾಮಾರಿ ರೋಗಗಳು ಉಲ್ಬಣಿಸಿವೆ. ಇದಲ್ಲದೆ ಇದು ನೆಮ್ಮದಿ ಕೂಡ ಹಾಳು ಮಾಡಿ, ಪರಿಸರ ವಿನಾಶದತ್ತ ಕೊಂಡೊಯುತ್ತಿದೆ. ಹಾಗೂ ಹಬ್ಬ ಹರಿದಿನ ಆ ಸಂಪ್ರದಾಯಗಳಲ್ಲಿ ದಲಿತರು, ತಮಟೆ, ಡೋಲು, ಕೋಲಾಟ, ಶೋಭಾನೆ ಪದಗಳನ್ನು ಹಾಡಿ ಕುಣಿಯುತ್ತಿದ್ದರೂ ಆದರೆ ಜಾಗತೀಕರಣ ಹಾಗೂ ಪಾಶ್ವಾತ್ಯರ ಸಂಸ್ಕೃತಿಯ ಪ್ರಭಾವದಿಂದ ಇಂದು ಮೇಡ ಇನ್ ಫ್ಯಾರಿಸ್ ಆಗಿ ಎಲ್ಲವೂ ಮಾಯವಾಗುತ್ತಿವೆ. ಜೊತೆಗೆ ಸಾಂಸ್ಕೃತಿಕ ದಿನಗಳು ಅರ್ಥವನ್ನೇ ಕಳೆದುಕೊಳ್ಳುತ್ತಿವೆ. ಇಂದಿನ ಮಕ್ಕಳಲ್ಲಿ ವಸ್ತ್ರ ಸಂಹಿತೆಯ ಬಗ್ಗೆ ಅರಿವು

ಮೂಡಿಸುವುದು ಅಗತ್ಯವೂ/ಅನಗತ್ಯವು ಒಟ್ಟಾರೆ ಭಾರತದಲ್ಲಿ ದಲಿತರ ಸಂಸ್ಕೃತಿಯ ಮೂಲಪಿತೃಗಳೆನಿಸಿದ್ದಾರೆ.

ಒಂದು ರೀತಿಯ ಸಮಾಜದಲ್ಲಿ ಕಲೆಯು ಕಲೆಗಾರನ ಬದುಕಿನ ಸರ್ವಾಂಗೀಣ ಅಭಿವೃದ್ಧಿ ಎನ್ನಿಸಿದ್ದ ದಲಿತರು 'ಕಾಯಕವೇ ಕೈಲಾಸ' ಎಂದು ಭಾವಿಸಿ ಕಲೆಯನ್ನು ಉಸಿರಾಗಿಸಿದ್ದಾರೆ. ಚಪ್ಪಲಿ ಮಾಡುವುದು ಕಲೆ ಅದು ವೃತ್ತಿಯಾಗಿಯೂ ಸ್ವೀಕರಿಸಿದ್ದಾರೆ. ಭಾರತ ವೈವಿಧ್ಯತೆಯ ಸಾಂಸ್ಕೃತಿಕತೆಯ ಪ್ರತೀಕ ಆದರೆ ಅದು ಕೆಲವೇ ಮುಂದುವರಿದ ಕೋಮು ವರ್ಗಗಳಿಗೆ ಮಾತ್ರ ಸೀಮಿತವಾಗಿದೆ. ಹೀಗೆಯೇ ರಕ್ತಗತವಾಗಿ ಬಂದ ಪರಂಪರೆಯೇ ಸಂಸ್ಕೃತಿ ಎನಿಸಿದೆ.

**ಧಾರ್ಮಿಕ ವಿಶ್ಲೇಷಣೆ:**

ಉದಾರ ಮಾನವತವಾದದ ಸ್ವರೂಪದ ಬಗ್ಗೆ ಮಾತನಾಡುವ ದೇವನೂರರು ಒಂದು ಧರ್ಮದಲ್ಲಿ ಧರ್ಮ ಉಂಟೋ ಇಲ್ಲವೂ ಎಂಬ ಅಳತೆಯನ್ನು ಆಹಿಂಸೆ ಮತ್ತು ಐಕ್ಯತೆಯಿಂದ ಅಳೆಯಬೇಕೆನ್ನುವ ಅಭಿಲಾಷೆಯನ್ನು ಮುಂದಿಡುತ್ತಾರೆ. ಆದರೆ ಮನುಷ್ಯ ಹುಟ್ಟುತ್ತಾ ವಿಶ್ವ ಮಾನವನಾಗಿ ಹುಟ್ಟಿ ಬೆಳೆಯುತ್ತಾ ಅಲ್ಪಮಾನವನಾಗುವ ಸನ್ನಿವೇಶವನ್ನು ಕುರಿತು ಮಾತನಾಡುತ್ತಾರೆ. ಇದರಿಂದ ಮನುಷ್ಯನ ಧರ್ಮ ಎಲ್ಲ ಧರ್ಮಗಳನ್ನೂ ಮೀರಿದು ಆದರಿಂದ ಪಂಪ 'ಮಾನವಧರ್ಮ ತಾನೊಂದೇ ವಲಂ' ಎಂದಿದ್ದಾರೆ. ತದನಂತರ ಬಂದ ವಿಶ್ವಮಾನವ ಕಾಲದಲ್ಲಿ ವಚನಸಾಹಿತ್ಯ ಪ್ರಮುಖವಾದದ್ದು.

ವಚನ ಚಳುವಳಿಯ ನೇತಾರರಾದ ಬಸವಣ್ಣನವರನ್ನು ಒಂದು ಜನಾಂಗದ ದೇವರಾಗಿ ಮಾಡಿರುವುದು ವಿರ್ಪಯಾಸ. ಜೊತೆಗೆ ಒಂದು ಧರ್ಮದ ವ್ಯಕ್ತಿಯಾಗಿ ಸೀಮಿತಗೊಳಿಸುವುದನ್ನು ಖಂಡಿಸುತ್ತಾರೆ. ಈ ವಚನ ಧರ್ಮವನ್ನು ಜಾತಿಯ ಬಚ್ಚಲಿನಿಂದ ಮೇಲತ್ತಿದ್ದಾರೆ ಜಗತ್ತಿಗೆ ಬೆಳಕಾಗಬಹುದೇನೋ. ಅಂದರೆ ವಿಶಾಲದೃಷ್ಟಿ ಬಳಸಿಕೊಳ್ಳಲು ಅನುಕೂಲವಾಗುತ್ತಿತ್ತು.

ನಮ್ಮ ಧರ್ಮಗಳಲ್ಲಿನ ಆಚಾರ-ವಿಚಾರಗಳಿಗೆ ರೀಲಿಜನ್ ಎಂದು ಅರ್ಥೈಸಲು ಸಾಧ್ಯವಿಲ್ಲ. ಆದ್ದರಿಂದ ರಿಲೀಜಿಯನ್ ಅಥವಾ ಧರ್ಮ ಇವೆರಡೂ ತಪ್ಪಾಗಿ ಅರ್ಥ ಮಾಡಿಕೊಂಡಿದ್ದು, ಆದರೆ ನಮ್ಮ ಧರ್ಮಕ್ಕೆ ಬೇರೆ ಬೇರೆ ಅರ್ಥಗಳಿವೆ. ಐಕ್ಯತೆ ಎಂದರೆ ವಚನ ಸಾಹಿತ್ಯದಲ್ಲಿ "ಲೋಕದ ಡೊಂಕು ನೀವೇಕೆ ತಿದ್ದುವಿರಿ ನಿಮ್ಮ ತನುವ ಸಂತೈಸಿಕೊಳ್ಳಿ. ನಿಮ್ಮ ಮನವ ಸಂತೈಸಿಕೊಳ್ಳಿ. ನೆರೆಮನೆಯ ದುಃಖಕ್ಕೆ ಅಳುವವರ ಮೆಚ್ಚ ನಮ್ಮ ಕೂಡಲಸಂಗಮದೇವ"[೧೮] ಇದನ್ನು ಮಹಾದೇವರು ಲೋಕದ ಡೊಂಕು ನಿವೇಕೆ ತಿದ್ದುವಿರಿ ಎನ್ನುವುದರಲ್ಲಿ ಏನಿದಿಯೋ ತಿಳಿಯದು. ಆದರೆ ಅಲ್ಲಿ ಡೊಂಕಿದೆ ಎಂಬ ತೀರ್ಮಾನ ನಮ್ಮ ತಲೆಯಲ್ಲಿ ಸ್ಪಷ್ಟವಾಗುತ್ತದೆ.

---

[18] ವಚನಗಳು - ಬಸವಣ್ಣ, ಕನ್ನಡ ಸಾಹಿತ್ಯ ಚರಿತ್ರೆ-ಹೆಚ್.ನಂಜೇಗೌಡರು, ಪುಟ-೧೫೧

ಹೀಗೆಯೇ ವಚನದ ಕೊನೆಯ ಸಾಲುಗಳಲ್ಲಿ ನೆರೆಮನೆಯ ದುಃಖಕ್ಕೆ ಅಳಬೇಡಿ ಎಂದು ಸಹ ಹೇಳುತ್ತದೆ ಎಂದರೆ ಮೊದಲು ನಿಮ್ಮನ್ನು ನೀವೂ ಅರಿತುಕೊಳ್ಳುವುದು ಬಿಟ್ಟು ಜಗತ್ತಿನ ವ್ಯವಹಾರಕ್ಕೆ ಹೋದರೆ ಕೂಡಲ ಸಂಗಮ ಮೆಚ್ಚುವುದಿಲ್ಲ.

ಈಗಿನ ಸಮಾಜದಲ್ಲಿ ಭಕ್ತರು ಕಂಡ ಕಂಡ ಕಲ್ಲು ದೇವರಿಗೆ ಸಾವಿರಾರು ರೂಗಳನ್ನು ಖರ್ಚು ಮಾಡುತ್ತಿದ್ದಾರೆ, ಆದರೆ ಜನ್ಮಕೊಟ್ಟ ತಂದೆ ತಾಯಿಗಳಿಗೆ ಅನ್ನ, ನೀರು, ಪೌಷ್ಟಿಕಾಂಶ ನೀಡದೇ ಎಷ್ಟೋ ಮಕ್ಕಳು ಸಾಯಿಸುತ್ತಿದ್ದಾರೆ. ಇನ್ನೊಂದೆಡೆ ಹೆತ್ತ ಮಕ್ಕಳಿಗೆ ಸರಿಯಾಗಿ ನೋಡಿಕೊಳ್ಳದೇ ದೇವರು ಧರ್ಮ ಎಂಬ ಗೊಡ್ಡು ಆಚರಣೆಗಳಿಗೆ ಬಲಿ ಕೊಡುತ್ತಿದ್ದಾರೆ. ಇಂತಹ ಜನಗಳಿಗೆ ಯಾವ ರೀತಿ ತೀಳಿ ಹೇಳಬೇಕೆಂದು ತಿಳಿಯುತ್ತಿಲ್ಲ ಎಂದು 'ಪುಟ್ಟಣ್ಣ' ಬೇಸರ ವ್ಯಕ್ತಪಡಿಸಿದ್ದಾರೆ.

ರಾಮಜನ್ಮಭೂಮಿ ಎಂಬುದಾಗಿ ಇನ್ನೊಂದು ಧರ್ಮದ ಮೇಲೆ ಅಕ್ರಮಣ ಮಾಡುವುದು. ಧರ್ಮವೇ ಅಥವಾ ಕ್ರೈಸ್ತಧರ್ಮದ ಮೇಲೆ ಆಕ್ರಮಣ ಮಾಡುವುದು ಸರಿಯೇ. ಇದರಿಂದ ಒಂದು ಧರ್ಮ ಇನ್ನೊಂದು ಧರ್ಮವನ್ನು ಸಹಿಸಿಕೊಳ್ಳಬೇಕು. ಆದರೆ ಇಂದೂ ಧರ್ಮಗಳೂ ತಮ್ಮ ಧರ್ಮ ಮೊದಲಾಗಬೇಕೆಂಬ ಸ್ವಾರ್ಥದಿಂದ ಇನ್ನಿತರ ಧರ್ಮಗಳ ಮೇಲೆ ಪರಿಣಾಮ ಬೀರುತ್ತಿವೆ. ಅಲ್ಲದೆ ಹಿಂದೂ ಧರ್ಮದಲ್ಲೇ ದಲಿತರಿಗೆ ಸಮಾನತೆ ಇಲ್ಲದೆ ಇರುವುದರಿಂದ ಇಂದಿನ ಜನತೆ ಮತಾಂತರಗೊಳ್ಳುತ್ತಾರೆ ಉದಾ:ಅಂಬೇಡ್ಕರ್ ಹುಟ್ಟುವಾಗ ಹಿಂದೂ ಆಗಿ ಹುಟ್ಟಿದರು, ಆದರೆ ಸಾಯುವಾಗ ಬೌದ್ಧರಾಗಿ ಸಾಯುತ್ತಾರೆ. ಇದರಿಂದ ಅಸಮಾನತೆ ವಿರುದ್ಧ ದಲಿತರು ಬೌದ್ಧಧರ್ಮಕ್ಕೆ ಮತಾಂತರಗೊಳ್ಳುವುದು ಅನಿವಾರ್ಯ ಎಂದು ಚಿಂತನೆ ಮಾಡಿರುತ್ತಾರೆ.

**ಭಾಷಿಕ ವಿಶ್ಲೇಷಣೆ:**

ದೇವನೂರ ಮಹಾದೇವರು, 'ಎದೆಗೆ ಬಿದ್ದ ಅಕ್ಷರ' ಕೃತಿಯಲ್ಲಿ ಪ್ರಾದೇಶಿಕ ಭಿನ್ನತೆ, ಒಂದು ಸಾಂಸ್ಕೃತಿಕತೆಯ ಗ್ರಾಮ್ಯ ಭಾಷೆಯ ನೆಲೆಯ ಕತೆಗಳು ಅದರ ಭಾಷೆಯಲ್ಲಿ ಸಮರ್ಥವಾಗಿ ವ್ಯಕ್ತಗೊಳ್ಳುತ್ತೇವೆ ಎನ್ನುವುದು ಸರಿ. ಆದರೆ ಭಾಷೆಗೆ ಸಂಬಂಧಿಸಿದಂತೆ ಇವತ್ತಿನ ಯುವ ಪೀಳಿಗೆಗೆ ಕನ್ನಡ ನುಡಿ ಅನಿವಾರ್ಯ ಎನ್ನಿಸದಿರುವುದು ಸರಿಯಷ್ಟೇ. ಇಂಥ ಸಂದರ್ಭದಲ್ಲಿ ಭಾಷೆಯು ಸರಳತೆಯಲ್ಲಿ ಸೂಕ್ಷ್ಮತೆಯನ್ನು ಹೊಳೆಯಿಸದೆ ಹೋದರೆ ಅಂಥ ಭಾಷೆಗೆ ಉಳಿಗಾಲವಿಲ್ಲ, ಹಾಗೆಯೇ ಭಾಷೆಯನ್ನು ಪ್ರೀತಿಸುವ ಎಲ್ಲರೂ ಅದರ ಬಳಕೆಯಲ್ಲಿ ಜಾಗೃತರಾಬೇಕಿದೆ. ಈ ಜಾಗೃತಿ ಸಂವಿಧಾನಬದ್ಧವಾದ ಕರ್ತವ್ಯ ಮತ್ತು ಹಕ್ಕಾಗಿದೆ.

ಇನ್ನು ಸರ್ಕಾರಿ ವಲಯದ ಶಿಕ್ಷಣದ ಬಗ್ಗೆ ಚಿಂತನೆ ಮಾಡುವುದಾದರೆ, ಇಂಗ್ಲೀಷಿನ ವ್ಯಾಮೋಹದಿಂದಾಗಿ ಎಲ್ಲರೂ ಇಂಗ್ಲೀಷ್ ಶಾಲೆಗಳಲ್ಲಿ ವಿದ್ಯಾಭ್ಯಾಸ ನೀಡಲು ಮುಂದಾಗಿ ೩ ಸಾವಿರ ಸರ್ಕಾರಿ ಶಾಲೆಗಳನ್ನು ವಿಲೀನಗೊಳಿಸುವ ಪರಿಸ್ಥಿತಿ ಬಂದಿದೆ. ಕಡ್ಡಾಯ ಶಿಕ್ಷಣದ ಹಿನ್ನಲೆಯಲ್ಲಿ ಸಾರ್ವಜನಿಕ ಶಿಕ್ಷಕರು ಹಕ್ಕು ಕಾಯಿದೆಯಿಂದ ಶಿಕ್ಷಣದ ಮಾಧ್ಯಮವಾದ ಕನ್ನಡ ಕೇವಲ ನೆಪ ಮಾತ್ರವಾಗಿದೆ. ಆದರೆ ಭಾಷೆ ಅಧೋಗತಿಗೆ ಇಳಿದಿದೆ ಎಂಬ ನೋವಿನ ಹತಾಶೆ

ಮನೋಭಾವನೆಯಿದೆ. ಒಮ್ಮೆ ಬಿ.ಎಂ.ಟಿ.ಸಿ. ಸಾರಿಗೆ ಸಂಸ್ಥೆಯವರು ಕೊಡುವ ನೃಪತುಂಗ ಪ್ರಶಸ್ತಿಯು ಸ್ವೀಕರಿಸುವ ಸಂದರ್ಭದಕ್ಕೆ ಸಂಪೂರ್ಣ ಶಿಕ್ಷಣ ಮಾಧ್ಯಮ ಕನ್ನಡವೇ ಆಗಿರಬೇಕು ಎಂಬುದಾಗಿ ಅವರ ಮನವಿ. ಅದು ಒಂದು ಜನಾಂಗದ ಭಾಷೆಯು ಆ ಜನಾಂಗದ ಇರುವಿಕೆ ಮತ್ತು ಸಂಸ್ಕೃತಿಯನ್ನು ತಿಳಿಸುತ್ತದೆ ಎಂದಿದ್ದಾರೆ. ಒಟ್ಟಿನಲ್ಲಿ ಭಾಷೆ ಒಂದು ಸಮುದಾಯದ ಜೀವಂತ ಸಂಕೇತವೇ ಆಗಿದೆ.

ಭಾಷೆಯು ಆಡಳಿತ ಮತ್ತು ಜನಗಳ ನಡುವೆ ಅಂತರ ಕಮ್ಮಿ ಮಾಡಲು ಇರುವ ಗೆರೆಯಂತೆ, ಕನ್ನಡ ಹೋರಾಟಗಾರರು ದಡ್ಡರೋ ಅಥವಾ ಮುಗ್ಧರೂ ಅಥವಾ ಇಂಗ್ಲೀಷ್ ಮಾಧ್ಯಮದ ಆಶೆ ನಮ್ಮ ಒಳಗೆ ಇದೆಯೋ ನನಗಂತೊ ಅರ್ಥವಾಗದೇ ಉಳಿದಿದೆ. ಎಲ್ಲರಿಗೂ ಇಂಗ್ಲೀಷ್ ಮಾಧ್ಯಮವೇ ಬೇಕು.

**'ಎದಗೆ ಬಿದ್ದ ಅಕ್ಷರ' ಕೃತಿಯ ಕುರಿತು:**

**ನಟರಾಜ್ ಹುಳಿಯಾರು:** ಇಂದು ಜಾತಿಗಳು, ಗುಂಪುಗಳಾಗಿ ವಿಕಾರತೆ ತೋರಿಸುತ್ತಿವೆ. ಆದರೆ ಎದೆಗೆ ಬಿದ್ದ ಅಕ್ಷರ, ಕೃತಿಯು ಹರಿದು ಹಂಚಿಹೋಗಿದ್ದ ಎಲ್ಲರನ್ನೂ ಒಟ್ಟಾಗಿ ಸೇರಿಸುತ್ತಿದೆ. ಹಾಗೂ ಇಡೀ ದಲಿತ ಚಳುವಳಿಯ ನಾಯಕರು ಮಾಡಬೇಕಾದ ಒಂದು ಕೆಲಸವನ್ನು ಅದೊಂದು ಪುಸ್ತಕ ಮಾಡುತ್ತಿದೆ. ಸಮುದಾಯದ ಪ್ರಜ್ಞೆಯಾಗಿ ಎಲ್ಲರನ್ನೂ ಎಚ್ಚರಿಸುತ್ತಿದೆ. ಯಾರಿಗೆ ಏನೇ ಅನಿಸುತ್ತಿದ್ದರು ಅದು ದಲಿತರನ್ನು ಮತ್ತೇ ಮತ್ತೇ ಚಡಪಡಿಕೆ ಹುಟ್ಟಿಸಿವೆ.

"ಕೃತಿಯಲ್ಲಿನ ಬರಹಗಳು, ಬಹುಶಃ ಸಂತನಂತೆ ಬದುಕುತ್ತಿರುವುದಕ್ಕೂ ಅವರ ಬರವಣಿಗೆ ಓದುವುದಕ್ಕೂ ಒಂಚೂರು ವ್ಯತ್ಯಾಸವಿಲ್ಲ ಸಹಿಸಿಕೊಳ್ಳವಿಕೆಯಲ್ಲಿ ಯಾವ ಗಾಂಧಿಗೂ ಕಡಿಮೆಯೇ ಇಲ್ಲ".[೧೯]

**ಕವಿ ಸಿದ್ಧಲಿಂಗಯ್ಯನವರು** ನಮ್ಮ ಮಹದೇವ ಒಳ್ಳೆಯವರು ಎಂದರೆ ಅವರ ಒಳ್ಳೆತನ ನೋಡಿ ಬೇಜಾರಾಗಿದೆ ಯಾರು ಇಂದು ಈ ರೀತಿ ಯಾರು ಬದುಕುತ್ತಿದ್ದಾರೆ ? ... ಇವರ ಸಂಯಮ ಎಂತಾದ್ದು ಎಂದು ಒಂದು ಘಟನೆಯಲ್ಲಿ ಹೇಳುತ್ತಾರೆ. ಆಶೀಸ್ ನಂದಿ ಮಹಾದೇವ ಭ್ರಷ್ಟಾಚಾರಿ ಎಂದು ಬೈಯುತ್ತಿದ್ದರೂ ಎಂದಾಗ ಸಂಯಮದಿಂದಲೇ ಉತ್ತರಿಸಿದರು. ಇದು ಅವರು ದೃಷ್ಟಿಕೋನದಲ್ಲಿ ಬದಲಾವಣೆ ಮಾಡಿಕೊಳ್ಳಬೇಕು ಎಲ್ಲವನ್ನು ನೆಗಟೀವ್ ಆಗಿ ಚಿಂತಿಸುವುದನ್ನು ಬಿಡಬೇಕು.

ಹಾಗೆಯೇ ದಲಿತ ಯುವಕರು ಅಂಬೇಡ್ಕರ್ ಫೋಟೋ ಪೂಜಿಸುವುದನ್ನು ಬಿಡಬೇಕು. ನಿಮ್ಮ ಮನಸ್ಸುಗಳಲ್ಲಿ ಪೂಜಿಸಿ ನೀವೇ ಪುಟ್ಟ ಅಂಬೇಡ್ಕರ್‌ರಾಗಬೇಕೆಂದು ವಿನಂತಿಸಿದ್ದಾರೆ. ಒಮ್ಮೆ ನಂಜುಂಡೇಶ್ವರ ದರ್ಶನ ಪಡೆಯಲು ಆಗಲಿಲ್ಲವಂತೆ ಆದಕ್ಕೆ

---

[19] ಕನ್ನಡಪ್ರಭ ಪತ್ರಿಕೆ – ಪುಟ – ೦೬ – ಡಿಸೆಂಬರ್ – ೭ – ೨೦೧೩

ನಂಜುಂಡೇಶ್ವರನಿಗೆ ನನ್ನ ದರ್ಶನ ಮಾಡುವ ಭಾಗ್ಯ ಅವನಿಗೆ ಸಿಕ್ಕಲಿಲ್ಲ. ನಮಗೆ ನಾವೇ ದೇವರು ಎಂದಿದ್ದಾರೆ.

"ದಲಿತ ಸಂಘಟನೆಗಳು ಒಗ್ಗೂಡಿಸುವಲ್ಲಿ ನಿಜಕ್ಕೂ ಇದೊಂದು ಅಪರೂಪದ ಪುಸ್ತಕ".[೨೦] ಲಕ್ಷ್ಮೀನಾರಾಯಣ ನಾಗವಾರ ಗುರುಪ್ರಸಾದ್ ಕರೆಗೊಡ ಮುಂತಾದವರು ಸಮಾಜ ಒಗ್ಗೂಡುವ ಭರವಸೆಯ ಬಗ್ಗೆ ಮಾತನಾಡಿದ್ದಾರೆ. ದಸಂಸ ಒಂದಾಗಲಿದೆ. ಹೊಸ ಸಾಧ್ಯತೆಗಳನ್ನು ಕೃತಿಯಂತೆ ಹುಟ್ಟು ಹಾಕಿದೆ. ಇಷ್ಟಕ್ಕೆಲ್ಲಾ ಕಾರಣ ಎದೆಗೆ ಬಿದ್ದ ಅಕ್ಷರ ಕೃತಿಯು ಎಂದಿದ್ದಾರೆ.

ಕೃತಿಯ ಬಗ್ಗೆ ರೈತ ಸಂಘದ **"ಕೆ.ಎಸ್.ಪುಟ್ಟಣಯ್ಯ"** ಮಾತನಾಡೀ "ಎದೆಗೆ ಬಿದ್ದ ಅಕ್ಷರ ಕುರಿತು ದಲಿತರಿಗೆ ಇಂದಿನ ಕರ್ನಾಟಕ ರಾಜಕಾರಣದಲ್ಲಿ ಕುಟುಂಬವಾದಿ, ಕೋಮುವಾದಿ, ಮೂಲವ್ಯಾದಿ ರಾಜಕಾರಣದ ಪರ್ಯಾಯ ಸಾಂಸ್ಕೃತಿಕ ಮನಸಿನ ರಾಜಕಾರಣಗಳು, ಹೊರ ಹೊಮ್ಮಬೇಕು. ಇಲ್ಲವಾದರೆ ದಲಿತರು ರಾಜಕೀಯವಾಗಿ ಸದೃಢರಾಗಲು ಸಾಧ್ಯವಾಗುವುದಿಲ್ಲವೆಂದು"[೨೧] ಆದರಿಂದ ಈ ಕೃತಿ ಮಾರ್ಗದರ್ಶನ ಹೌದು.

**'ಲಿಂಗದೇವರು ಹಳೆ ಮನೆ' ಹೇಳಿಕೆಯಂತೆ** "ಇತಿಹಾಸ ವರ್ತಮಾನದಲ್ಲಿ ದಲಿತರ ಬದುಕು, ಹಿಂಸೆ, ನೋವು, ಸಾಮಾಜಿಕ ಅಸ್ಪಶ್ಯತೆ, ವರ್ಣಬೇಧ ನೀತಿ ಹಾಗೂ ಹಿಂದೂ ಸಮಾಜದಲ್ಲಿದ್ದ ಹಿಂದೂ ದಲಿತರ ಬಗೆಗಿನ ತಿರಸ್ಕಾರ ಮನೋಭಾವದ ಮಾನಸಿಕ ತೊಳಲಾಟಗಳನ್ನು ಪುಸ್ತಕ ವಿವರಿಸುತ್ತದೆ ಎಂದಿದ್ದಾರೆ".[೨೨]

**ಬಾಲು:** ದೇವನೂರು ಮಹಾದೇವರಿಂದ ಒಂದು ಕೃತಿಯು ವೈಚಾರಿಕ ಮತ್ತು ಚರ್ಚೆಗೆ ಒಳಗಾದ ನಿರೀಕ್ಷಿತ ಬರಹವನ್ನು ಓದಿದೆ. ಆದರೆ ನಿಜವಾಗಿಯೂ ನಿರಾಶೆಯಾಯಿತು. ಎದೆಗೆ ಬಿದ್ದ ಅಕ್ಷರ ಪುಸ್ತಕದಲ್ಲಿ ದೇವನೂರರು ಬರೆದಿರುವ ಉತ್ತಮ ಒಳನೋಟಗಳನ್ನು ಹಿನ್ನಲೆಯಲ್ಲಿಟ್ಟುಕೊಂಡು ಅವರ ಪ್ರತಿಕ್ರಿಯೆಗಳನ್ನು ಓದಿದ್ದಕ್ಕೆ ಬಹುಶಃ ನನಗೆ ನಿರಾಶೆಯಾದರು ಲೇಖನ ಓದಿದಾಗಿನಿಂದ ನನಗೆ ತಲೆ ಕೊರೆಯುತ್ತಿದೆ.

ದಿನಾಂಕ : ೧೬-೦೨-೨೦೧೩ ಪಾಟೀಲ ಪುಟ್ಟಪ್ಪ ಸಭಾಂಗಣ ಎದೆಗೆ ಬಿದ್ದ ಅಕ್ಷರ ಕುರಿತ ವಿಚಾರ ಸಂಕಿರಣ ಕುರಿತು ಎದೆಗೆ ಬಿದ್ದ ಅಕ್ಷರ ಕೃತಿಯೂ ಮೌನದೊಡಲೊಳಗೆ ಮೂಡಿದ ಅಕ್ಷರ.

ದೇವನೂರು ಮಹಾದೇವರು ವ್ಯಕ್ತಿಯಾಗಿ ಒಂದು ಶಕ್ತಿಯಾಗಿ ಒಂದು ಮೂರ್ತಿರೂಪದ ಸೃಜನಶೀಲ ಕೃತಿಯಿರುವಂತೆಯೇ ನಮ್ಮ ನಡುವೆ ಬದುಕಿದ್ದಾರೆ. ಮಾತಿನಲ್ಲಿ

---

[20] ಪ್ರಜಾವಾಣಿ ಪತ್ರಿಕೆ – ಪುಟ – ೨ – ಡಿಸೆಂಬರ್ – ೧೩-೨೦೧೩

[21] ಜನದನಿಯ ಸಾರಥಿ – ವಾರ್ತಾಭಾರತಿ – ಪೆಬ್ರವರಿ – ೨೮ – ೨೦೧೧

[22] ಅವಧಿ – ಪೆಬ್ರವರಿ – ೧೪– ೨೦೧೩

ನಂಬಿಕೆ ಕಳೆದುಕೊಂಡು ಅವರ ಬರವಣಿಗೆಯಲ್ಲಿ ಕ್ರಿಯಾಶೀಲತೆ, ಅಲೋಚನೆ ಕ್ರಮಗಳನ್ನು ಅನ್ಯನವಾಗಿಸಿದೆ.

ಒಟ್ಟಿನಲ್ಲಿ ಕೃತಿಯು ಯಾವುದೇ ರೀತಿಯ ಅಡೆತಡೆಗಳಿಲ್ಲದೆ ಸರಾಗವಾಗಿ ಓದಿಸಿಕೊಂಡು ಹೋಗುವ ಕೃತಿ ಎದೆಗೆ ಬಿದ್ದ ಅಕ್ಷರವಾಗಿದೆ.

**ಅಡಿ ಟಿಪ್ಪಣಿ**

೧) ವಚನಗಳು–ಬಸವಣ್ಣ : ಕನ್ನಡ ಸಾಹಿತ್ಯ, ಸಾಹಿತ್ಯ ಚರಿತ್ರೆ– ಎಚ್.ನಂಜುಂಡೇಗೌಡ ೧೫೧

೨) ಕನ್ನಡ ಪ್ರಭ ಪತ್ರಿಕೆ – ಪುಟ – ೦೬ – ಡಿಸೆಂಬರ್ – ೭ – ೨೦೧೩

೩) ಪ್ರಜಾವಾಣಿ ಪತ್ರಿಕೆ – ಪುಟ – ೦೨ – ಡಿಸೆಂಬರ್ – ೧೩–೨೦೧೩

೪) ಜನದನಿಯ ಸಾರಥಿ – ವಾರ್ತಾಭಾರತಿ – ಫೆಬ್ರವರಿ – ೨೮ – ೨೦೧೧

೫) ಅವಧಿ – ಪೆಬ್ರವರಿ – ೧೪ – ೨೦೧೩

# ಅಧ್ಯಾಯ ೫

## ಉಪಸಂಹಾರ

ಎದೆಗೆ ಬಿದ್ದ ಅಕ್ಷರ ಕೃತಿಯಲ್ಲಿ ಸಮಕಾಲೀನ ವಿದ್ಯಮಾನಗಳಿಗೂ ಸಮಾಜಕ್ಕೆ ಅದರಿಂದಾಗುವ ಒಳಿತನ್ನು ಹೇಳಿದೆ. ಇದರೊಂದಿಗೆ ಸಾಮಾಜಿಕ, ರಾಜಕೀಯ, ಧಾರ್ಮಿಕ ಸಾಂಸ್ಕೃತಿಕ ಭಾಷಿಕ ನೆಲೆಗಳಲ್ಲಿ ಮನುಷ್ಯನ ಮುಗ್ಧತೆ, ಮಾನವೀಯ ಮೌಲ್ಯ ಆದರ್ಶಗಳನ್ನು ಗುರುತಿಸಿ, ಜಾತಿ, ಧರ್ಮ, ಭಾಷೆ, ಮನುಷ್ಯತ್ವಗಳ ಪರಿಚಯಿಸಿ ವ್ಯಕ್ತಿ–ಸರ್ಕಾರಗಳ ದೌರ್ಬಲ್ಯ ಅವುಗಳೊಂದಿಗೆ ಒಂದು ಕಾಲದ ಸಮಾಜದಲ್ಲಿನ ವಿದ್ಯಮಾನಗಳನ್ನು ವಿವರಿಸಬಹುದೆಂದೂ ನಂಬಿದ್ದೇನೆ. ಆದರೆ ಇವೆಲ್ಲಕ್ಕಿಂತ ಮಿಗಿಲಾದದ್ದು ಆಧುನಿಕ ಮಾನವನ ತಲ್ಲಣಗಳು, ಆತಂಕಗಳನ್ನು ಹೇಳುವಂತಾದ್ದಾಗಿದೆ.

ಎದೆಗೆ ಬಿದ್ದ ಅಕ್ಷರ ಧರ್ಮಾತೀತವಾದ ವಿಶ್ವಮಾನವ ಬದುಕಿನ ವಿವಿಧ ಸ್ತರಗಳನ್ನು ತಲುಪಿದ ವ್ಯವಸ್ಥೆಯನ್ನು ವಿವರಿಸಬಹುದು. ಹೀಗಿಯೇ ನನ್ನ ಸಂಶೋಧನ ಅಧ್ಯಯನದ ಪ್ರಯತ್ನವೂ ಕೂಡ ಬೇರೆ ಬೇರೆ ಲೇಖನಗಳ ವ್ಯಕ್ತಿಗಳ ಹೇಳಿಕೆಗಳ ವಿಶ್ಲೇಷಣೆ ಸಾಮಾಜಿಕ ಮೌಲ್ಯ ಆದರ್ಶಗಳ ನ್ಯಾಯವನ್ನು ಎತ್ತಿ ಹಿಡಿಯುವ ಪ್ರಯತ್ನ ಮಾಡಿರುವೆ. ನಗರ ಜೀವನದ ಕನಸು ಮತ್ತು ಭ್ರಮೆಗಳಲ್ಲಿ ಜನರು ಹಾಳಾಗಿ ಮನುಷ್ಯತ್ವ ಮರೆಯಾಗಿರುತ್ತಿರುವ, ಸಾಮಾಜಿಕ ಶೋಷಣೆಗಳತ್ತ ಗಮನ ಸೆಳೆದು, ಸವರ್ಣೀಯರಲ್ಲಿ ಮಾನವೀಯ ಗುಣಗಳು ಬೆಳಸಿಕೊಳ್ಳುವ ಮನುಕುಲದ ಉದ್ಧಾರದ ಸೂತ್ರದ ಹುಡುಕಾಟಕ್ಕೆ ಎದೆಗೆ ಬಿದ್ದ ಅಕ್ಷರ ಪ್ರೇರಿಪಿಸುತ್ತದೆ. ಪ್ರೇರಿಪಿಸುವಂತಾಗಬೇಕು. ಈ ಕಾರಣಕ್ಕೆ ಈ ಪುಸ್ತಕವನ್ನು ಹೊಸ ತಲೆಮಾರಿನ ಪ್ರತಿಯೊಬ್ಬರು ಓದುವಂತಾಗಬೇಕು. ಆದರಿಂದ ಸಮಾನ ಮನಸ್ಕಾರ ಅಭಿರುಚಿ ಚಿಂತನೆಗಳನ್ನು ಹೆಚ್ಚಿಸಿ ಪರಿಪೂರ್ಣತೆಯಡೆಗೆ ಸಾಗಿಸುತ್ತದೆ.

**ಮುಕ್ತಾಯ :** ಕೃತಿಯು ನನ್ನ ಗ್ರಹಿಕೆಯಲ್ಲಿ ಕಂಡಂತೆ ಕೇವಲ ಸಾಮಾಜಿಕ ನೆಲೆಗಳಲ್ಲಿ ಮಾತ್ರ ಕಥನಗಳನ್ನೂ ರೂಪಿಸಿಲ್ಲ. ಬದುಕಿನ ಮನುಷ್ಯನ ಸ್ವರೂಪ ಸ್ವಭಾವಗಳು ಕುರಿತ ತಾತ್ವಿಕ ಶೋಧವಿದೆ. ಭಾರತದ ಸಾಂಸ್ಕೃತಿಕತೆಯ ಐಕ್ಯತೆ ದೈವದಂತೆ ಭಿನ್ನತೆ ದೆವ್ವದಂತೆ ಒಟ್ಟಾರೆ ಜಗತ್ತು ಒಂದು ಕುಟುಂಬದಂತೆ ಎನಿಸಿ ಕೃತಿಯಲ್ಲಿ ವೈವಿಧ್ಯತೆಯೊಂದಿಗೆ ಏಕತೆಯನ್ನು ಸಮನ್ವಯಗೊಳಿಸಿದ್ದಾರೆ.

ಎದೆಗೆ ಬಿದ್ದ ಅಕ್ಷರ ಕೃತಿಯೂ ಸಾಮಾಜಿಕವಾಗಿದ್ದು ಸಾಮಾಜಿಕತೆಯನ್ನು ಮುಖ್ಯ ಅಸಕ್ತಿಯನ್ನಾಗಿ ಮಾಡಿಕೊಳ್ಳಬೇಕೆಂಬ ಒತ್ತಾಯದಿಂದ ಹೊರ ಬಂದಿದೆ. ದೇವನೂರು ಮಹಾದೇವರ ಚಿಂತನೆಯಲ್ಲಿ ಮನುಷ್ಯರಿದ್ದಾರೆ. ಅ ಮನುಷ್ಯರಿಗೆ ಚಹರೆಗಳಿವೆ. ಆದರೆ ಅವರ ಮೂಲಕ ಹುಡುಕುತ್ತಿರುವುದು ಜನರ ಸಾಮಾಜಿಕ ವ್ಯಕ್ತಿತ್ವವನಲ್ಲ. ಬದಲಿಗೆ ಮನುಷ್ಯತ್ವದ

ತಿರುಳನ್ನೂ, ಅತಂತ್ಯ ವಾಸ್ತವೂ, ಅಮೂರ್ತವೂ ಆದ ಸಾಮಾಜಿಕ ಸಂಘರ್ಷಗಳ ಜೊತೆ ಜೊತೆಗೆ ಇಡೀ ಜಗತ್ತಿನಲ್ಲಿರುವ ಲೌಕಿಕ ಮತ್ತು ತರ್ಕಾತೀತ ಬದುಕನ್ನು ಪರಿಚಯಿಸಿದ್ದಾರೆ.

ಬಡವರ ಮಕ್ಕಳ ಶಿಕ್ಷಣದಲ್ಲಿ ಭಿನ್ನ ಭೇದ ತೊಡೆದು ಸಮಾನ ಶಿಕ್ಷಣ ಪದ್ಧತಿಯ ಮೂಲಕ ಸಂವಿಧಾನದ ಆಶಯಗಳಿಗೆ ತಕ್ಕಂತೆ ಪಠ್ಯ ರಚಿಸಿ ನಾಳಿನ ಭಾರತ ಕಟ್ಟಬೇಕಾಗಿದೆ ಎಂಬ ತಿಳುವಳಿಕೆ ಮೂಡಿಸಿದ್ದಾರೆ.

ಹೀಗೆಯೇ, ಪ್ರತಿಯೊಬ್ಬ ನಾಗರೀಕನ ಬದುಕು ನಮಗಾಗಿ ಅಲ್ಲ; ಅದು ನಿಮಗಾಗಿ ಎನ್ನುವಂತೆ ಪ್ರತಿಯೊಬ್ಬರು ನೀವು ಬದುಕಿ ಬೇರೆಯವರನ್ನು ಬದುಕಿಸಿ ಎನ್ನುವ ಪರಿಕಲ್ಪನೆಯನ್ನು ತರುತ್ತದೆ. ಆದರೆ ಮನುಷ್ಯನ ಸ್ವಾರ್ಥದಿಂದಾಗಿ ಪ್ರಕೃತಿ ವಿನಾಶದ ಹಂಚಿನಲ್ಲಿದೆ. ಆದ್ದರಿಂದ ನಮ್ಮೊಳಗಿನ ರಾಕ್ಷಸತ್ವ ದೌರ್ಜನ್ಯಗಳನ್ನು ನಿಲ್ಲಿಸಿ ಮನುಷ್ಯರಂತೆ ಅಂತಃಕರಣವನ್ನು ಎಚ್ಚರಗೊಳಿಸಿ ಬದುಕಬೇಕೆಂಬ ಅರಿವು ಮೂಡಿಸಿದ್ದಾರೆ. ಜೊತೆಗೆ **'ನಮ್ಮ ನಮ್ಮ ಧರ್ಮಗಳು ನಮ್ಮ ಮನೆಯೊಳಗಿರಲಿ; ಸಂವಿಧಾನವೇ ಭಾರತದ ಧರ್ಮವಾಗಲಿ'** ಎಂಬ ಧಾರ್ಮಿಕ ಚಿಂತನೆ ಸ್ಮರಿಸಿದ್ದಾರೆ.

ಎದೆಗೆ ಬಿದ್ದ ಅಕ್ಷರ ಕೃತಿಯು ಬಿಡುಗಡೆಯ ದಿನವೇ ಇನಾಂದಾರ್ ಪ್ರಶಸ್ತಿಯನ್ನು ಗಳಿಸಿತು. ಇದರಿಂದ ಕೃತಿಯ ಮೌಲ್ಯ ಹಾಗೂ ಶ್ರೇಷ್ಠತೆ ಹೆಚ್ಚು ಮನ್ನಣೆ ಗಳಿಸಿಕೊಂಡಿದೆ. ಆದರಿಂದಲೇ ಓದುಗರನ್ನು ಹೆಚ್ಚು ಆಕರ್ಷಿಸುವ ಕೃತಿಯು ಬೇಗ ಐದಾರೂ ಮುದ್ರಣಗಳನ್ನು ಕಂಡಿದೆ. ಕೃತಿಯಲ್ಲಿ ದಲಿತತ್ವದ ಅರಿವು ಹಾಗೂ ಸ್ಪಂದನೆಯನ್ನು ಗುರುತಿಸಿ ನಾಡಿನ ಜನತೆಯ ಜನಮುಖಿಯಾಗಿ, ಜೀವ ಮುಖಿಯಾಗಿ ತುಡಿಯವುದು ನನ್ನಂಥವರಿಗೆ ಹಿರಿಮೆಯೆನಿಸಿದೆ. ಇದರಲ್ಲಿನ ಸಾಮಾಜಿಕ ಹಾಗೂ ದಾರ್ಶನಿಕರಾದ, ಬುದ್ಧ, ಬಸವ, ಗಾಂಧಿ, ಅಂಬೇಡ್ಕರ್, ಪೆರಿಯಾರ್, ಲೋಹಿಯ, ಮಾವೋ, ಮಾರ್ಕ್ಸ್ ವಾದ. ವಿಚಾರವಾದಿಗಳ ಸಮಾಲೋಚನೆಯ ಚಿಂತನೆ ಈ ರೀತಿಯ ಸಂಗ್ರಹದಲ್ಲಿದೆ. ಒಟ್ಟಾರೆ ದೇವನೂರು ಮಹಾದೇವ ತಮ್ಮ ಎದೆಗೆ ಬಿದ್ದ ಅಕ್ಷರ ಕೃತಿಯಲ್ಲಿನ ಲೇಖನಗಳಲ್ಲಿ ಅನಗತ್ಯ ವಿಜೃಂಭಣೆಯಿಲ್ಲದೆ ತಮ್ಮ ದೃಷ್ಟಿಗೆ ಯೋಗವಾದದ್ದನ್ನು ತಮ್ಮದೇ ಆದ ರೀತಿಯಲ್ಲಿ ಮಂಡಿಸಿದ್ದಾರೆ. ಅಲ್ಲಲ್ಲಿ ತಮ್ಮ ನಿಲುವು ಹತಾಶೆ, ಧೋರಣೆಯನ್ನು ಪ್ರತಿಕ್ರಿಯೆಗಳನ್ನು ಸಮರ್ಥಿಸಿಕೊಂಡಿದ್ದಾರೆ. ದಲಿತರ ಹಕ್ಕಿನ ಪರವಾಗಿ ಸವರ್ಣಿಯರನ್ನು ಪ್ರಶ್ನಿಸುವ ಹಾಗೂ ಸಮಾನತೆಯ ಸಮಾಜಕ್ಕಾಗಿ ಮಾನವೀಯ ಮೌಲ್ಯಗಳ ಜೀವನಾಡಿಯಾಗಿ ಎದೆಗೆ ಬಿದ್ದ ಅಕ್ಷರ ಮೂಡಿ ಬಂದಿದೆ.

ಸೂಕ್ಷ್ಮವಾದ ಸಾಮಾಜಿಕ, ರಾಜಕೀಯ, ಸಾಂಸ್ಕೃತಿಕ, ಧಾರ್ಮಿಕ, ಕಥನಗಳಿಂದ ಓದುಗರ ಮನ ಗೆದ್ದಿರುವ ದೇವನೂರ ಮಹಾದೇವರ ಮುಂದಿನ ಬರವಣಿಗೆ ಬಗ್ಗೆ ಅಪಾರ ಕುತೂಹಲ ನಿರೀಕ್ಷೆಗಳಿವೆ.

## ಆಕರ ಗ್ರಂಥಗಳು


ದ್ಯಾವನೂರು ಕಥಾ ಸಂಕಲನ

ಒಡಲಾಳ – ಕಿರು ಕಾದಂಬರಿ

ಕುಸುಮಬಾಲೆ – ಕಾದಂಬರಿ

ಪ್ರತಿಕಾ ವರದಿಗಳು : ಕೆಲವು ಬಿಡಿ ಲೇಖನಗಳು

ಪ್ರಜಾವಾಣಿ,

ಕನ್ನಡ ಪ್ರಭಾ,

ಅವಧಿ,

ವಿಜಯ ಕರ್ನಾಟಕ

# ಪರಾಮರ್ಶನ ಗ್ರಂಥಗಳು


| ಕೃತಿ | ಲೇಖಕರು |
|---|---|
| ಊರ ಜಪ್ತಿಗೂ ಸಿಗದ ನವಿಲುಗಳು | ಸಂ.ಪಿ. ಚಂದ್ರಿಕಾ |
| ಅಪರೂಪದ ಬರಹಗಾರ | ಜಿ.ಎಚ್.ನಾಯಕ್ |
| ಬನವಾಸಿಯ ವನವಾಸಿ | ನಿರ್ಮಲ್.ಆರ್. |
| ದೇವನೂರು ಮಹಾದೇವರ ಕೃತಿಗಳ ಕುರಿತು | ಪಿ.ಲಂಕೇಶ್ |
| ಧರ್ಮ ಮತ್ತು ವೈಚಾರಿಕತೆ | ಬಿ.ವಿ.ವೀರಭದ್ರಪ್ಪ |
| ಸಮಾನತೆಯ ಕನಸನ್ನು ಮತ್ತೆ ಕಾಣುತ್ತ | ಕೆ.ಎಸ್. ಶಾಂತಕುಮಾರ್ |
| ದೇವನೂರು ಮಹಾದೇವ | ಡಾ.ಪ್ರಧಾನ ಗುರುದತ್ತ್ |
| ನವಕರ್ನಾಟಕ ಸಾಹಿತ್ಯ ಸಂಪದ | ಎಸ್.ಪಿ. ಶಂಕರನಾರಾಯಣರಾವ್ |
| ಆಸ್ಮಿತೆ | ಡಾ.ಗೀತಾ ಪ್ರಸಾದ್, |
| | ಡಾ.ಎಸ್.ಪ್ರಸಾದಸ್ವಾಮಿ |
| ಊರು ಕೇರಿ | ಡಾ.ಸಿದ್ದಲಿಂಗಯ್ಯ |
| ಸಮಾಜ ಸುಧಾರಕರು | ಡಾ.ಸಮತ.ಬಿ.ದೇಶಮಾನೆ |
| ಶತಮಾನದ ಸಣ್ಣ ಕಥೆಗಳು | ಡಾ.ಕರಿಗೌಡ ಬೀಚನಹಳ್ಳಿ |
| ಪ್ರಜ್ಞೆ | ಪ್ರೋ. ಶಿವರಾಮಯ್ಯ. ಪಿ. |
| ನೂರುಮರ ನೂರುಸ್ವರ | ಕೀರ್ತಿನಾಥ ಕೃರ್ತಕೋಟಿ |
| ಸಂಕ್ರಮಣ ಸಂಪುಟ ಸಂಚಿಕೆ | ಎಸ್.ಎಸ್. ಹಿರೇಮಠ |
| ದಲಿತತ್ವ ಅಕ್ಷರವಾಗದ ಆತ್ಮ ಕಥನಕ | ಡಾ.ಕಾ.ವೆಂ.ಶ್ರೀನಿವಾಸಮೂರ್ತಿ |
| ದಲಿತರು ಅಂದು ಮತ್ತು ಇಂದು | ಪ್ರೋ.ಡಾ.ಮುಮ್ತಾಜ್‌ಅಲಿಖಾನ್ |
| ದಲಿತ ಸಾಹಿತ್ಯ ಮತ್ತು ಸಂಸ್ಕೃತಿ | ಡಾ.ಎಚ್.ಟಿ.ಪೋತೆ |
| ಜೀವನದಿ | ಡಾ.ಗೀತಾ ಪ್ರಸಾದ್ |
| ಶೂದ್ರತಪಸ್ವಿ | ಕುವೆಂಪು |
| ಊರುಕೇರಿ | ಡಾ.ಸಿದ್ದಲಿಂಗಯ್ಯ |

